ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಮಾನವನು ತಲುಪಬಹುದಾದ ಅತ್ಯುನ್ನತ ಮಟ್ಟದಲ್ಲಿ ವಿರಾಜಿಸಿದ ಕೆಲವು ಮಹಿಳಾ ರತ್ನಗಳ ಉಜ್ವಲ ಅವಿಸ್ಮರಣೀಯ ಘಟನೆಗಳನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ಅವು ಮಾನವೇತಿಹಾಸದ ವರ್ಣರಂಜಿತ ಅಧ್ಯಾಯಗಳಾಗಿವೆ. ಆಸೆಗಳ ಮಾಯಾಜಾಲದಿಂದ ಪಾರಾಗಬೇಕೆಂಬ ವಿಶ್ವಾಸಿಗಳ ಉತ್ಕಟೇಚ್ಛೆಯು ಈ ಘಟನೆಗಳಲ್ಲಿ ತುಂಬಿಕೊಂಡಿದೆ. ಇಸ್ಲಾಮಿ ಸ್ಫೂರ್ತಿಯ ಜ್ವಲಂತ ಮಾದರಿಗಳಾಗಿ ಶೋಭಿಸಿದ ಈ ಮಾದರಿ ಮಹಿಳೆಯರ ಜೀವನ ಚರಿತ್ರೆಯು ವಾಚಕರ ಅಂತರಂಗವನ್ನು ಬೆಳಗಿಸದಿರಲಾರದು.

ಇದರಲ್ಲಿ ಸಮರ್ಪಿಸಲಾಗಿರುವ ಹಾಜರಾ, ಅಸ್ಮಾ, ಆಯಿಶಾ, ಸುಮಯ್ಯ, ಉಮ್ಮುಕುಲ್ಸುಮ್, ಶೈಮಾಅ, ಖನ್ಸಾ, ಹಮೀದಾ ಬಾನು, ಸೋಫಿಯಾ, ಆಬಿದಾಬೇಗಮ್, ನಈಮಾ, ಬನಾನ್ ಮುಂತಾದ ವೀರ ಮಹಿಳೆಯರು ಅವಿಸ್ಮರಣೀಯರಾಗಿದ್ದಾರೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ



>>>

# ಹಾಜರಾರ ಕಂಬನಿ

ಪವಿತ್ರ ಕಅಬಾ, ಜಗತ್ತಿನ ಅತ್ಯುತ್ಕೃಷ್ಟ ಭವನ. ಅದು ಕೇವಲ ಅಲ್ಲಾಹನ ಆರಾಧನೆಗಾಗಿ ನಿರ್ಮಿಸಲಾದ ಪ್ರಪ್ರಥಮ ಭವನ. ಜಗತ್ತಿನ ಸುಮಾರು 120 ಕೋಟಿ ಮುಸ್ಲಿಮರು ದಿನಂಪ್ರತಿ ಐದು ಬಾರಿ ಅದರತ್ತ ಮುಖ ತಿರುಗಿಸುತ್ತಾರೆ. ಮರಣದ ವೇಳೆ ನಮ್ಮ ಮುಖವು ಆ ದಿಕ್ಕಿಗಿರಬೇಕೆಂದು ಅವರೆಲ್ಲರೂ ಬಯಸುತ್ತಾರೆ. ಗತ ಶತಮಾನ ಗಳಲ್ಲಿ ನಿಧನರಾದ ಕೋಟಿಗಟ್ಟಲೆ ಸತ್ಯವಿಶ್ವಾಸಿಗಳ ಮುಖವನ್ನು ಕಅಬಾದ ಕಡೆಗೆ ಇರಿಸಿಯೇ ದಫನ ಮಾಡಲಾಗಿದೆ.

ಪ್ರತಿ ವರ್ಷ ಹಜ್ಜ್ ನಿರ್ವಹಣೆಗಾಗಿ ಆಗಮಿಸುವ ಅನೇಕ ಲಕ್ಷ ಜನರ ಆರಾಧನಾ ಕರ್ಮಗಳು ಕಅಬಾದ ಪರಿಸರದಲ್ಲಿಯೇ ನಡೆಯುತ್ತವೆ. ದಿನನಿತ್ಯ ಸಹಸ್ರಾರು ಮಂದಿ ಅಲ್ಲಿ ಉಮ್ರಾ ನಿರ್ವಹಿಸುತ್ತಾರೆ.

ಜಗತ್ತಿನಾದ್ಯಂತವಿರುವ ಕೋಟ್ಯಾಂತರ ಜನರ ಹೃದಯದೊಂದಿಗೆ ಬೆಸೆದ ಇಂತಹ ಭವನ ಜಗತ್ತಿನಲ್ಲಿ ಬೇರೊಂದಿಲ್ಲ.

ಕಅಬಾದ ವೈಶಿಷ್ಟ್ಯವೇನು? ಅದು ತಾಜ್‌ಮಹಲ್‌ನಂತೆ ಮನೋಹರವಾಗಿಲ್ಲ. ಕುತುಬ್ ಮಿನಾರ್‌ನಷ್ಟು ಉನ್ನತವಲ್ಲ. ಪಿರಮಿಡ್‌ಗಳಂತೆ ಅದ್ಭುತವಾಗಿಲ್ಲ. ನಲ್ವತ್ತು ಅಡಿ ಉದ್ದ, ಮೂವತ್ತೈದು ಅಡಿ ಅಗಲ, ಐವತ್ತು ಅಡಿ ಎತ್ತರದ ಆಯತಾಕಾರದ ಒಂದು ಸಾಮಾನ್ಯ ಕಟ್ಟಡ. ಮಕ್ಕಾದ ಪರಿಸರದಲ್ಲಿರುವ ಬೆಟ್ಟಗಳಿಂದ ಸಂಗ್ರಹಿಸಿದ ಬೂದು ಬಣ್ಣದ ಒರಟು ಕಲ್ಲುಗಳನ್ನು ಜೋಡಿಸಿ ಗಾರೆ ಹಾಕಲಾಗಿದೆ. ಬಹಳ ಸರಳ ನಿರ್ಮಾಣ. ಅದರ ಒಳಗೆ ಶೂನ್ಯವಾಗಿದೆ. ಅದರಲ್ಲಿ ಶಿಲ್ಪ ಸೌಂದರ್ಯವಿಲ್ಲ. ಕಲಾ ನೈಪುಣ್ಯವಿಲ್ಲ. ಕೆತ್ತನೆ ಕೆಲಸಗಳಿಲ್ಲ. ಹಾಗಿದ್ದರೂ ಅದಕ್ಕೆ ವಿಶೇಷ ಆಕರ್ಷಣೆಯಿದೆ. ಸಂದರ್ಶಕರನ್ನು ಆಶ್ಚರ್ಯಚಕಿತಗೊಳಿಸುತ್ತದೆ. ಎಷ್ಟು ನೋಡಿದರೂ ಆಸೆ ತಣಿಯು ವುದಿಲ್ಲ. ಅಲೌಕಿಕ ಸೌಂದರ್ಯವು ಅಲ್ಲಿ ತುಂಬಿ ನಿಂತಿದೆ.

ಕರಿ ಪರದೆಯಿಂದ ಮುಚ್ಚಿದ ಆ ಭವನವನ್ನು ಎವೆಯಿಕ್ಕದೆ ನೋಡುವಾಗ ಮನಸ್ಸು ನಲ್ವತ್ತೊಂದು ಶತಕಗಳ ಹಿಂದೆ ಸರಿಯುತ್ತದೆ. ಮಕ್ಕಾ ನಗರದ ನಿರ್ಮಾಣಕ್ಕೆ ಕಾರಣೀಭೂತರಾದ ಮೂವರು ಮಹನೀಯರ ಚಿತ್ರಗಳು ಕಣ್ಣ ಮುಂದೆ ಸುಳಿದಾಡುತ್ತದೆ. ಅವರ ಜೀವನದ ಅವಿಸ್ಮರಣೀಯ ಘಟನೆಗಳು ಸ್ಮೃತಿಪಟಲದಲ್ಲಿ ಮೂಡುತ್ತವೆ.

ಮಕ್ಕಾಕ್ಕೆ ಹೋಗುವ ಯಾರಿಗೂ ಹಾಜರಾರನ್ನು ಜ್ಞಾಪಿಸದಿರಲು ಸಾಧ್ಯವಿಲ್ಲ. ವರ್ಷಂಪ್ರತಿ ಹಜ್ಜ್‌ಗೆ ಬರುವ ಲಕ್ಷಾಂತರ ಯಾತ್ರಿಕರು ಮಕ್ಕಾದ ಮಾತೆಯಾಗಿರುವ ಹಾಜರಾರ ಹೆಜ್ಜೆ ಗುರುತುಗಳನ್ನು ಹಿಂಬಾಲಿಸಿ ಸಫಾ, ಮರ್ವಾಗಳ ಮಧ್ಯೆ ಹಲವು ಬಾರಿ ಓಡುತ್ತಾರೆ. ಉಮ್ರಾ ನಿರ್ವಹಿಸುವವರೂ ಹಾಗೆಯೇ ಮಾಡುತ್ತಾರೆ. ಇದು ಇಂದು ಅಥವಾ ನಿನ್ನೆ ಅಥವಾ ಪ್ರವಾದಿ ಮುಹಮ್ಮದ್(ಸ) ಅವರ ಆಗಮನದ ಬಳಿಕ ಆರಂಭವಾದುದಲ್ಲ. ಅದಕ್ಕೆ ಹಲವು ಶತಮಾನದ ಇತಿಹಾಸ ಇದೆ. ಆದ್ದರಿಂದಲೆ ಜಗತ್ತಿನಲ್ಲಿ ಅತ್ಯಧಿಕ ಸ್ಮರಿಸಲ್ಪಡುವ ಮತ್ತು ಅನುಕರಿಸಲ್ಪಡುವ ಮಹಿಳೆ, ಹಾಜರ ರೆಂದು ನಾವು ಧೈರ್ಯವಾಗಿ ಹೇಳಬಹುದು.

ಹಾಗಾದರೆ ಹಾಜರಾರು ಶ್ರೇಷ್ಠರಾಗಲು ಕಾರಣವೇನು? ಅವರು ರೂಪವತಿಯಾಗಿ ರಲಿಲ್ಲ. ಕರಿಯಳಾಗಿದ್ದರು. ಶ್ರೀಮಂತ ಅಥವಾ ಗಣ್ಯರಾಗಿರಲಿಲ್ಲ. ಗುಲಾಮ ಹೆಣ್ಣಾಗಿದ್ದರು ನೈಲ್‌ನದಿಯ ತೀರದಿಂದ ಸಾರಾರ ಸೇವೆಗಾಗಿ ಅವರನ್ನು ಕರೆತರಲಾಗಿತ್ತು. ತನ್ನ ಸವತಿಯಾಗಿ ಅಂಗೀಕರಿಸುವುದಕ್ಕೆ ಸಾರಾರಿಗೆ ಸಂಕೋಚವಿಲ್ಲದಂತಹ ಗುಣಶೀಲೆಯಾಗಿದ್ದರು.

ಪ್ರವಾದಿ ಇಬ್ರಾಹೀಮ್(ಅ) ಅವರ ಪ್ರಿಯ ಪತ್ನಿ ಸಾರಾರಿಗೆ ಸಾಮಾನ್ಯ ಗರ್ಭ ಧರಿಸುವ ವಯಸ್ಸು ದಾಟಿತು. ಹಾಗಿದ್ದರೂ ಒಂದು ಮಗು ಹುಟ್ಟಲಿಲ್ಲವೆಂಬ ಕೊರಗ ಅವರನ್ನು ಸದಾ ಕಾಡುತ್ತಿತ್ತು. ಆದ್ದರಿಂದ ಹಾಜರಾರಿಂದ ತಮ್ಮ ಮಗು ಹುಟ್ಟಿದ್ದ ತನಗೂ ಅದರಿಂದ ಹಿತವಾದೀತೆಂದು ನಿರ್ಧರಿಸಿದ ಸಾರಾ, ಹಾಜರಾರನ್ನು ವರಿಸುವಂತೆ ಪ್ರವಾದಿ ಇಬ್ರಾಹೀಮ್‌ರನ್ನು ಒತ್ತಾಯಿಸಿದರು. ಹಾಗೆಯೇ ಹಾಜರಾರನ್ನು ವಿವಾಹವಾದ ಪ್ರವಾದಿ ಇಬ್ರಾಹೀಮರಿಗೆ ಅವರಲ್ಲಿ ಒಂದು ಮಗು ಹುಟ್ಟಿತು. ಅವರು ಆ ಮಗನಿಗೆ ಇಸ್ಮಾಈಲ್ ಎಂದು ಹೆಸರಿಟ್ಟರು. ಅದೇ ಸಂದರ್ಭದಲ್ಲಿ ಸಾರಾ ಅನಿರೀಕ್ಷಿತವಾಗಿ ಗರ್ಭವತಿಯಾದರು.

ಒಂದು ದಿನ ಪ್ರವಾದಿ ಇಬ್ರಾಹೀಮ್(ಅ) ಹಾಜರಾ ಮತ್ತು ಪುಟ್ಟ ಮಗುವಿನ ಜತೆ ಮನೆಯಿಂದ ಹೊರಟರು. ಅನೇಕ ದಿನಗಳ ಸತತ ಸಂಚಾರದ ಬಳಿಕ ಅವರು ಬೆಟ್ಟಗಳಿಂದ ಸುತ್ತುವರಿದ ಒಂದು ಕಣಿವೆಗೆ ತಲಪಿದರು. ಮೂವತ್ತು ದಿನಗಳಲ್ಲಿ ಒಂಟೆ ಸವಾರಿಯಿಂದ ತಲುಪಬಹುದಾದಷ್ಟು ದೂರ ಅವರು ಬಂದಿದ್ದರು. ನಿರ್ಜನವಾದ ಬರಡು ಮರುಭೂಮಿ ಅಲ್ಲಿ ನೀರಿರಲಿಲ್ಲ. ಆದ್ದರಿಂದ ಗಿಡಮರಗಳೂ ಇರಲಿಲ್ಲ. ಆಹಾರಕ್ಕಾಗಿ ಪ್ರಾಣಿ ಪಕ್ಷಿಗಳು ಅತ್ತ ಕಡೆ ಸುಳಿದಾಡುತ್ತಿರಲಿಲ್ಲ. ಎಲ್ಲೆಡೆ ಗಂಭೀರ ಮೌನ ಕವಿದಿತ್ತು.

ಮಕ್ಕಾಕ್ಕೆ ತಲುಪಿದ ಪ್ರವಾದಿ ಇಬ್ರಾಹೀಮರು ಒಂದು ಬಂಡೆಯ ಮೇಲೆ ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದರು. ಅನಂತರ ಅಲ್ಲಿಂದ ಹೊರಟು ಹೋಗಲು ನಿರ್ಧರಿಸಿದರು ನಾನು ಮತ್ತು ಮಗುವು ಕಣಿವೆಯಲ್ಲಿ ಒಂಟಿಯಾಗಿರಬೇಕೆಂಬ ಕಠೋರ ಸತ್ಯವು ಹಾಜರಾರನ್ನು ದಿಗ್ಭ್ರಾಂತಗೊಳಿಸಿತು. ಹೊರಟು ನಿಂತ ಪತಿಯೊಡನೆ,

"ನೀವು ನಮ್ಮನ್ನು ಇಲ್ಲಿ ತೊರೆದು ಹೋಗುವಿರಾ?" ಎಂದು ಕೇಳಿದರು.

'ಹೌದು ಹಾಜರಾ' ಎಂದು ಪ್ರವಾದಿ ಇಬ್ರಾಹೀಮ್ ಗದ್ಗದಿತ ಸ್ವರದಿಂದ ಹೇಳಿದರು. ಅನಂತರ ಸ್ವಲ್ಪ ತಡೆದು,

"ಆದರೆ ಇಲ್ಲಿ ನೀವು ಒಂಟಿಯಲ್ಲ. ನಿಮ್ಮ ಜತೆ ಅಲ್ಲಾಹನಿದ್ದಾನೆ" ಎಂದರು.

"ಆತನ ಆಜ್ಞಾನುಸಾರ ನೀವು ನಮ್ಮನ್ನು ಇಲ್ಲಿಗೆ ಕರೆದು ತಂದಿರಾ?"

'ಹೌದು' ಆ ಪ್ರವಾದಿ ಪುಂಗವ ಹೇಳಿದರು.

"ಹಾಗಾದರೆ ನೀವು ಹೋಗಿರಿ. ನಮ್ಮನ್ನು ಆತನು ಸಂರಕ್ಷಿಸುವನು" ಹಾಜರಾ ಹೇಳಿದರು. ಮನಸ್ಸು ಎಷ್ಟೇ ಗಟ್ಟಿ ಮಾಡಿದರೂ ಅವರ ತುಟಿಗಳು ನಡುಗುತ್ತಿದ್ದುವು. ಕಪೋಲಗಳಿಂದ ಹರಿಯುತ್ತಿದ್ದ ಕಂಬನಿಯನ್ನು ಒರೆಸುತ್ತಾ ಪ್ರಿಯತಮನಿಗೆ ವಿದಾಯ ಕೋರಿದರು. ಇಬ್ರಾಹೀಮ್(ಅ) ಸ್ವಲ್ಪ ದೂರ ಸರಿದು ಮನಕರಗಿ ಪ್ರಾರ್ಥಿಸಿದರು,

"ಪ್ರಭೂ! ನೀನು ಈ ಪ್ರದೇಶವನ್ನು ಶಾಂತಿಯ ನೆಲೆ ಬೀಡಾಗಿ ಮಾಡು! ನನ್ನನ್ನೂ ನನ್ನ ಸಂತಾನಗಳನ್ನೂ ವಿಗ್ರಹಾರಾಧನೆಯಿಂದ ಮುಕ್ತಗೊಳಿಸು! ಹೇ ಪ್ರಭೂ! ಈ ವಿಗ್ರಹಗಳು ಬಹುಮಂದಿಯನ್ನು ದಾರಿ ತಪ್ಪಿಸಿವೆ. ನನ್ನ ಹಾದಿಯಲ್ಲಿ ಸಂಚರಿಸುವವರೇ ನನ್ನವರು. ಯಾರಾದರೂ ನನ್ನ ದಾರಿಯಿಂದ ತಪ್ಪಿ ನಡೆದರೆ. ಖಂಡಿತವಾಗಿಯೂ ನೀನು ದಯಾಳು ಮತ್ತು ಕರುಣಾಮಯಿಯಾಗಿರುವೆ. ಪ್ರಭೂ! ನಾನು ನನ್ನ ಸಂತಾನದ ಒಂದು ಭಾಗವನ್ನು ಕೃಷಿಯಿಲ್ಲದ ಈ ಕಣಿವೆಯಲ್ಲಿ, ನಿನ್ನ ಪಾವನ ಸ್ಥಳದ ಸಮೀಪ ನೆಲೆಗೊಳಿಸಿದ್ದೇನೆ. ಪ್ರಭೂ! ಅವರು ನಮಾಝನ್ನು ಸಂಸ್ಥಾಪಿಸಲಿಕ್ಕಾಗಿ ನಾನು ಹೀಗೆ ಮಾಡುತ್ತಿದ್ದೇನೆ. ಆದ್ದರಿಂದ ನೀನು ಜನಮನದಲ್ಲಿ ಅವರ ಬಗ್ಗೆ ಅನುಕಂಪವನ್ನು ಮೂಡಿಸು! ಅವರಿಗೆ ತಿನ್ನಲು ಫಲಗಳನ್ನು ನೀಡು! ಅವರು ಕೃತಜ್ಞರಾಗಬಹುದು."

ಹಾಜರಾ ಮತ್ತು ಪುತ್ರ ಇಸ್ಮಾಈಲ್ ಆ ಕಣಿವೆಯಲ್ಲಿ ಒಂಟಿಯಾದರು. ಅವರ ಬಳಿಯಿದ್ದ ಚರ್ಮದ ಚೀಲದಲ್ಲಿ ಸ್ವಲ್ಪ ನೀರು ಮತ್ತು ಇನ್ನೊಂದರಲ್ಲಿ ಕೆಲವು ಖರ್ಜೂರಗಳಿದ್ದವು. ಅವು ಮುಗಿದರೆ ಏನು ಮಾಡುವುದು? ಯಾವುದಾದರೂ ಕ್ರೂರ ಪ್ರಾಣಿ ಆಕ್ರಮಿಸಿಬಿಟ್ಟರೆ? ದರೋಡೆಕೋರರು ದಾಳಿಯಿಟ್ಟರೆ? ಇಂತಹ ಅನೇಕ ಭಯಾಶಂಕೆಗಳಿಂದ ಹಾಜರಾ ಬಸವಳಿದು ಕಣಿವೆಯಲ್ಲಿ ಒಂಟಿಯಾಗಿದ್ದ 'ಸರ್ಹಾ' ಮರದ ಬುಡದಲ್ಲಿ ಒರಗಿದರು. .

ನಿದ್ದೆಯಿಂದ ಎಚ್ಚೆತ್ತಾಗ ಬಿಸಿಲಿನ ಝಳದಿಂದ ಹಾಜರಾ ತತ್ತರಿಸಿದರು. ಎಂತಹ ಭೀಕರ ನಿಶ್ಶಬ್ದ. ಒಂದು ಕ್ರಿಮಿಯೂ ಮಿಸುಕಾಡದಂತಹ ಭೀಕರ ಸ್ಮಶಾನ ಮೌನ. ಎಂತಹ ಧೈರ್ಯಶಾಲಿಯನ್ನೂ ನಡುಗಿಸುವಂತಹ ಏಕಾಂತತೆ. ಪ್ರಾಣಿ-ಪಕ್ಷಿಗಳಿಲ್ಲ. ಹುಳು ಹುಪ್ಪಟೆಗಳಿಲ್ಲ. 'ಸರ್ಹಾ'ದ ಬುಡದಲ್ಲಿ ಬಂಡೆಗೊರಗಿದ್ದ ಹಾಜರಾರು ಬಹಳ ವ್ಯಾಕುಲಗೊಂಡಿದ್ದರು. ಯಾವುದಾದರೊಂದು ಜೀವಂತ ಪ್ರಾಣಿಯನ್ನು ನೋಡಲು ಅದೆಷ್ಟು ಕಾತರರಾಗಿದ್ದಾರೆಂದು ಊಹಿಸಬಹುದಾಗಿದೆ. ಹರ್ರುತ್ ಹಾಜರಾರು ಚೀಲದಲ್ಲಿದ್ದ

ಖರ್ಜೂರವೊಂದನ್ನು ಜಗಿದು ಹದಗೊಳಿಸಿ ಮಗುವಿನ ಬಾಯಿಯಲ್ಲಿರಿಸಿದರು. ಗಂಟಲು ಪಸೆಗಾಗಿ ಸ್ವಲ್ಪ ನೀರನ್ನು ನೀಡಿದರು. ಅನಂತರ ಹಸಿವು ತಣಿಸಲಿಕ್ಕಾಗಿ ತಾನೂ ಸ್ವಲ್ಪ ಖರ್ಜೂರ ಮತ್ತು ನೀರನ್ನು ಸೇವಿಸಿದರು.

ಸಂಜೆ ಕವಿದಾಗ ಮನಸ್ಸಿಗೆ ತಳಮಳವಾದರೂ ಹಾಜರಾ ಅಧೀರರಾಗಲಿಲ್ಲ. ಅಲ್ಲಾಹನ ಮೇಲಿನ ಅಚಂಚಲ ವಿಶ್ವಾಸವು ಅವರಿಗೆ ಅಪೂರ್ವ ನೆಮ್ಮದಿ ನೀಡಿತು. ಹೀಗೆಯೇ ಎರಡು ಹಗಲು ಮತ್ತು ರಾತ್ರಿಗಳು ಕಳೆದು ಹೋದುವು. ಉರಿ ಕಾರುವ ಬಿಸಿಲು, ಭೀಕರ ತಾಪ. ಮಗು ಬಾಯಾರಿಕೆಯಿಂದ ಅಳ ತೊಡಗಿತು. ತಾಯಿಯ ಮನ ಕರಗಿತು. ಮಗುವು ಅತ್ತು ಬಳಲಿತು. ಹಾಜರಾರ ಜಂಘಾಬಲವೇ ಉಡುಗಿತು. ಮಗುವಿನ ಮುಖವನ್ನು ನೋಡಲು ಅವರಿಂದಾಗಿರಲಿಲ್ಲ. ಅವರು ಅಲ್ಲಾಹನನ್ನು ಕರೆದು ಪ್ರಾರ್ಥಿಸಿದರು. ಆದರೆ, ಅವರ ನಿರೀಕ್ಷೆ ಭಗ್ನಗೊಂಡಿತು. ಅವರು ಸಂಪೂರ್ಣ ಪರಿಭ್ರಾಂತರಾದರು. ಆದರೂ ಅವರು ಸುಮ್ಮನಿರಲಿಲ್ಲ. ಯಾರನ್ನೂ ಹಳಿಯಲಿಲ್ಲ, ಯಾವುದೋ ಆಂತರಿಕ ಪ್ರೇರಣೆಯಿಂದ ಸಮೀಪದ ಸಫಾ ಬೆಟ್ಟದ ಮೇಲೇರಿದರು. ವ್ಯಾಕುಲದಿಂದ ಸುತ್ತಲೂ ನೋಡಿದರು. ಎಲ್ಲಾದರೂ ನೀರಿನ ಆಶ್ರಯವಿದೆಯೇ ಎಂದು ಪರಿಶೀಲಿಸಿದರು. ನಿರಾಶೆಯಿಂದ ಕೆಳಗಿಳಿದರು.

ಇನ್ನೊಂದೆಡೆಯಲ್ಲಿದ್ದ 'ಮರ್ವಾ' ಬೆಟ್ಟದತ್ತ ಓಡಿದರು. ಎಲ್ಲಿಯೂ ನೀರಿನ ತೇವ ಅಥವಾ ಜನವಾಸವಿರುವ ಸೂಚನೆ ಅವರಿಗೆ ಕಾಣಿಸಲಿಲ್ಲ. ಪುನಃ 'ಸಫಾ' ಬೆಟ್ಟವನ್ನು ಏರಿದರು. ಹೀಗೆ ಆರೇಳು ಬಾರಿ 'ಸಫಾ-ಮರ್ವಾ' ಬೆಟ್ಟದ ಮಧ್ಯೆ ಪರಿಭ್ರಾಂತಿಯಿಂದ ಓಡಾಡಿದರು. ಕೊನೆಗೆ ಹತಾಶೆಯಿಂದ ಮಗುವಿದ್ದೆಡೆಗೆ ಮರಳಿದರು. ಮಗುವು ನಿಶ್ಚಲ ವಾಗಿರಬಹುದೆಂದು ಅವರು ಶಂಕಿಸಿದರು. ಆದರೆ ಮಗುವಿನ ಬಳಿ ಬಂದ ಹಾಜರಾ ಆಶ್ಚರ್ಯಚಕಿತರಾದರು. ಸಂತೋಷಾತಿರೇಕದಿಂದ ಕುಣಿದರು. ಪುತ್ರ ಇಸ್ಮಾಈಲ್ ಕಾಲು ಬಡಿಯುತ್ತಿದ್ದ ಸ್ಥಳದಿಂದ ನೀರು ಚಿಮ್ಮಿ ಹರಿಯುತ್ತಿದೆ. ಹಾಜರಾರ ಕಣ್ಣುಗಳಿಂದ ಕೃತಜ್ಞತೆಯ ಬಾಷ್ಪ ಹನಿಗಳು ಉದುರಿದವು. ಅವರು ಕಣ್ಣೀರನ್ನು ಒರೆಸಿಕೊಂಡರು. ನೀರನ್ನು ತಡೆಹಿಡಿದರು. ಆದರೂ ನೀರಿನ ಹರಿವು ನಿಲ್ಲದಾಗ ಅವರು 'ಝುಮ್, ಝುಮ್'(ನಿಲ್ಲು, ನಿಲ್ಲು) ಎಂದು ಹೇಳಿದರು. ಆ ತಾಯಿಯು ಮಗುವಿಗೆ ಬೇಕಾದಷ್ಟು ನೀರು ಕುಡಿಸಿದರು, ತಾನೂ ಕುಡಿದರು. ಅಂದು ಹಾಜರಾರಿಗೂ ಮಗುವಿಗೂ ದಾಹಜಲವಾದ ಮತ್ತು ಅನಂತರದ ಜನರಿಗೆ ತೀರ್ಥ ಜಲವಾದ ಮರುಭೂಮಿಯ ಆ ಅದ್ಭುತ ಬಾವಿಗೆ 'ಝುಮ್-ಝುಮ್' ಎಂಬ ಹೆಸರು ಬಂತು.

'ಝುಮ್-ಝುಮ್' ಕುಡಿದು ಆ ಮಗು ಬೆಳೆಯಿತು. ನೀರಿನ ಒರತೆಯಿರುವುದರಿಂದ ಯಾತ್ರಾ ತಂಡಗಳೂ ಆ ಹಾದಿಯಲ್ಲಿ ಬರಲಾರಂಭಿಸಿದವು. ಕ್ಷಿಪ್ರವಾಗಿ ಅದೊಂದು ಜನವಾಸ ಕೇಂದ್ರವಾಗಿ ಬೆಳೆಯಿತು.

ಇಸ್ಲಾಮೀ ಸಂಸ್ಕೃತಿ ಮತ್ತು ನಾಗರಿಕತೆಯ ಮೂಲ ಕೇಂದ್ರವಾದ ಮಕ್ಕಾ ಮತ್ತು ಅಲ್ಲಿನ ನಿವಾಸಿಗಳ ಪಿತಾಮಹರಾದ ಪ್ರವಾದಿ ಇಸ್ಮಾಈಲ್‌ರನ್ನು ಪತಿಯ ಗೈರುಹಾಜರಿಯಲ್ಲಿ

ಉನ್ನತ ಶಿಕ್ಷಣ ಶೀಲಗಳನ್ನು ನೀಡಿ ಬೆಳೆಸಿದ ಮಾದರಿ ತಾಯಿ, ಹ. ಹಾಜರಾ. ಅಲ್ಲಾಹನ ಮತ್ತು ತಂದೆ ತಾಯಿಗಳೊಂದಿಗಿನ ಕರ್ತವ್ಯಗಳನ್ನು ಸಂಪೂರ್ಣವಾಗಿ ಪಾಲಿಸುವಂತಹ ಪುತ್ರನನ್ನು ಬೆಳೆಸುವ ಘನ ಜವಾಬ್ದಾರಿಕೆಯನ್ನು ಅವರು ಚೆನ್ನಾಗಿ ನಿರ್ವಹಿಸಿದರು.

ಮಕ್ಕಾಕ್ಕೆ ಬರುವ ಸತ್ಯವಿಶ್ವಾಸಿಗಳೆಲ್ಲರೂ ಬಹಳ ಆಸಕ್ತಿಯಿಂದ 'ಝಮ್-ಝಮ್' ನೀರು ಕುಡಿಯುತ್ತಾರೆ. ಇತಿಹಾಸದ ಸ್ಮರಣೆಗಳನ್ನು ಮೆಲುಕು ಹಾಕುವವರಿಗೆ ಅದರಲ್ಲಿ ತಣ್ಣೀರಿನ ರುಚಿಯಿರುವಂತೆ ಭಾಸವಾಗುತ್ತದೆ. ಬಾಯಾರಿ ಚಡಪಡಿಸುತ್ತಿದ್ದ ಮಗುವಿಗೆ ಒಂದು ತೊಟ್ಟು ನೀರಿಗಾಗಿ ಓಡಾಡಿ ಕಣ್ಣೀರು ಸುರಿಸಿದ ಹಾಜರಾರ ಕಥೆಯನ್ನು ಸ್ಮರಿಸದೆ 'ಝಮ್ ಝಮ್' ನೀರನ್ನು ಯಾರಿಗಾದರೂ ಕುಡಿಯಲಾದೀತೇ? ತಾಯಿಯ ಹೃದಯದಲ್ಲಿ ತುಂಬಿದ ಪುತ್ರ ವಾತ್ಸಲ್ಯವೆಂಬ ಭವ್ಯ ಭಾವನೆಯು ಕರುಣೆಯ ಶಾಶ್ವತ ಒರತೆಯಾಗಿ ಭೂಮಿಯಿಂದ ಹೊರ ಚಿಮ್ಮಿದ ಆ ನೀರಿನಲ್ಲಿ ಹಾಜರಾರ ಕಣ್ಣೀರು ಮತ್ತು ರೋದನವೂ ಸೇರಿಕೊಂಡಿದೆ. 'ಸಫಾ-ಮರ್ವಾ'ದಲ್ಲಿ ಅವರ ಮೊರೆ ಮಾರ್ದನಿಸುತ್ತದೆ.

---

# ಫಿರ್‌ಔನ್‌ನ ಪತ್ನಿಯ ಪ್ರಾರ್ಥನೆ

"ಈ ಮಗುವನ್ನು ಕೊಲ್ಲಬೇಡಿರಿ. ಈತನಿಂದ ಕಣ್ಮನ ತಣಿಯಬಹುದು. ಮುಂದೆ ಈತನಿಂದ ಏನಾದರೂ ಸಹಾಯವಾಗಬಹುದು. ಆದ್ದರಿಂದ ನಾವು ಈತನನ್ನು ನಮ್ಮ ಮಗುವೆಂದೇ ಭಾವಿಸಿ ಬೆಳೆಸೋಣ" ಎಂದು ಆಸಿಯಾರು ಪತಿ ಫರೋವನೊಡನೆ ಹೇಳಿದರು.

ಸ್ನಾನಕ್ಕೆ ಹೋಗಿದ್ದ ಪರಿವಾರದವರಿಗೆ ಹೊಳೆಯಲ್ಲಿ ಸಿಕ್ಕಿದ ಪೆಟ್ಟಿಗೆಯನ್ನು ತೆರೆದು ನೋಡಿದಾಗ ಅಲ್ಲಿ ನೆರೆದಿದ್ದವರಿಗೆ ಅಚ್ಚರಿಯಾಯಿತು. ಅದರಲ್ಲೊಂದು ಎಳೆಗೂಸು. ನೋಟಕರ ಮನಸೆಳೆಯುವ ರೂಪ. ಆದ್ದರಿಂದ ಅದನ್ನು ಕೊಲ್ಲುವುದಕ್ಕೆ ಆಸಿಯಾರ ಮನಸ್ಸು ಒಪ್ಪಲಿಲ್ಲ. ಹಲವು ವರ್ಷಗಳ ದಾಂಪತ್ಯ ಜೀವನದಲ್ಲಿ ಒಂದು ಮಗು ಹುಟ್ಟದೆ ವ್ಯಥೆಪಡುತ್ತಿದ ಫರೋವನಿಗೆ ಪತ್ನಿಯ ಕೋರಿಕೆಯನ್ನು ತಿರಸ್ಕರಿಸ ಲಾಗಲಿಲ್ಲ. ಹಾಗೆ ಬದುಕುಳಿದ ಮಗುವೇ ಅನಂತರ ಪ್ರವಾದಿಯಾದ ಮೂಸಾ(ಅ).

ಪ್ರವಾದಿ ಮೂಸಾ(ಅ), ಇಸ್ರಾಈಲ್ ವಂಶದವರು. ಪ್ರವಾದಿ ಇಬ್ರಾಹೀಮ್‌ರ(ಅ) ಮೊಮ್ಮಗನಾಗಿದ್ದ ಪ್ರವಾದಿ ಯಅ್‌ಕೂಬ್‌ರಿಗೆ(ಅ) ಇಸ್ರಾಈಲ್ ಎಂಬ ಹೆಸರಿತ್ತು. ಅವರ ಸಂತತಿ ಪರಂಪರೆಯನ್ನು ಬನೀ ಇಸ್ರಾಈಲರೆಂದು ಕರೆಯಲಾಗುತ್ತಿತ್ತು. ಪ್ರವಾದಿ ಯೂಸುಫ್‌ರ(ಅ) ಕಾಲದಲ್ಲಿ ಅವರು ಈಜಿಪ್ಟ್‌ಗೆ ವಲಸೆ ಹೋಗಿ ನೆಲೆಸಿದರು. ಅಲ್ಲಿ ಅವರ ಜನಸಂಖ್ಯೆ ಹೆಚ್ಚಿದಾಗ ಆ ನಾಡಿನ ಕೋಪ್ಟ್(ಖಿಬ್ತಿ)ಗಳು ಮತ್ತು ಆಡಳಿತಗಾರರು ಅವರನ್ನು ಕಠೋರವಾಗಿ ಹಿಂಸಿಸಲಾರಂಭಿಸಿದರು.

ಮೂಸಾರ ಜನನ ವೇಳೆಯಲ್ಲಿದ್ದ ಫಿರ್‌ಔನ್ ಅತ್ಯಂತ ಕ್ರೂರಿಯಾಗಿದ್ದ. ಈಜಿಪ್ಟ್‌ನ ಆಡಳಿತಗಾರರಿಗೆ 'ಫಿರ್‌ಔನ್' ಎಂಬ ಬಿರುದಿತ್ತು. ಆತನು ಬನೀ ಇಸ್ರಾಈಲರಿಗೆ ಹುಟ್ಟುವ ಗಂಡು ಮಕ್ಕಳನ್ನು ವಧಿಸುವಂತೆ ಆಜ್ಞಾಪಿಸಿದ್ದನು. ಅವರಲ್ಲಿ ಯಾರಾದರೊಬ್ಬರು ಕ್ರಾಂತಿಕಾರಿಗಳಾಗಿ ಬೆಳೆದು ತನ್ನ ಆಧಿಪತ್ಯಕ್ಕೆ ಕಂಟಕರಾದಾರೆಂಬ ಭೀತಿಯೇ ಈ ಕ್ರಮಕ್ಕೆ ಹೇತುವಾಗಿತ್ತು. ಬನೀ ಇಸ್ರಾಈಲರ ಗಂಡು ಸಂತಾನಗಳ ಹತ್ಯೆಯಿಂದಾಗಿ ಆ ವಂಶದ ಮಹಿಳೆಯರ ಸ್ಥಿತಿ ಶೋಚನೀಯವಾಗಿತ್ತು.

ಮೂಸಾರು ಪ್ರವಾದಿ ಯಅ್‌ಕೂಬ್‌ರ ಮೊಮ್ಮಗನಾಗಿದ್ದ ಇಮ್‌ರಾನ್‌ರ ಪುತ್ರರಾಗಿದ್ದರು. ತಾಯಿ ಯೋಕಾಬೆದ್‌ರು ಗಂಡು ಮಗುವಿನ ಜನನದಿಂದ ತುಂಬಾ ಕಳವಳಗೊಂಡರು. ಪುತ್ರನನ್ನು ಫಿರ್‌ಔನನ ಕಿಂಕರರು ಕೊಲ್ಲುವರೆಂದು ದುಃಖಿತರಾದರು, ಆಗ ಅಲ್ಲಾಹನು ಅವರಿಗೆ ಹೀಗೆ ತಿಳಿಸಿದನು: "ಆ ಮಗುವಿಗೆ ಮೊಲೆಯುಣ್ಣಿಸಿರಿ, ಆತನ ಪ್ರಾಣದ ಭೀತಿಯಿದ್ದರೆ ಆತನನ್ನು ಒಂದು ಪೆಟ್ಟಿಗೆಯಲ್ಲಿರಿಸಿ ಹೊಳೆಯಲ್ಲಿ ತೇಲಿಸಿ ಬಿಡಿರಿ. ಹೆದರಬೇಡಿ, ಹೊಳೆಯು ಆತನನ್ನು ರಕ್ಷಿಸುವುದು."

ಹಾಗೆಯೇ ಯೋಕಾಬೆದ್‌ರು ಪುತ್ರ ಮೂಸಾರನ್ನು ಹೊಳೆಯಲ್ಲಿ ತೇಲಿ ಬಿಟ್ಟರು. ಫಿರ್‌ಔನ್‌ನ ಪರಿವಾರದವರು ಆತನನ್ನು ಮೇಲೆತ್ತಿದರು. ಅವರು ಆತನನ್ನು ಅರಮನೆಯಲ್ಲಿ ರಾಜಕುಮಾರನಂತೆ ಬೆಳೆಸಿದರು. ವಸ್ತುತಃ ಫಿರ್‌ಔನನು ತನ್ನ ವೈರಿಯನ್ನು ಪೋಷಿಸುತ್ತಿದ್ದನು. ಆಸಿಯಾರ ಮಟ್ಟಿಗೆ ಆ ಮಗುವು ಸೌಭಾಗ್ಯದ ಮಾರ್ಗದರ್ಶಕನಾಗಿತ್ತು.

ತರುವಾಯ ಪ್ರವಾದಿಯಾಗಿ ನೇಮಕಗೊಂಡ ಮೂಸಾರಿಗೆ, ಫಿರ್‌ಔನ್‌ನ ಬಳಿ ಹೋಗಿ ಆತನನ್ನು ಸತ್ಯದ ಹಾದಿಗೆ ಆಹ್ವಾನಿಸುವಂತೆ ತಿಳಿಸಲಾಯಿತು. ಹಾಗೆಯೇ ಅವರು ಫಿರ್‌ಔನ್ ಮತ್ತು ಅವನ ಸಂಗಡಗರಿಗೆ ದೇವನ ಸನ್ಮಾರ್ಗದ ಬಗ್ಗೆ ಬೋಧಿಸಿದರು. ತನ್ನ ಪ್ರವಾದಿತ್ವವನ್ನು ಸಾಬೀತುಪಡಿಸುವ ದೃಷ್ಟಾಂತಗಳನ್ನೂ ತೋರಿಸಿದರು. ಆದರೆ ಫಿರ್‌ಔನ್ ಅದನ್ನು ಒಪ್ಪಲಿಲ್ಲ. ಆತನು ಉದ್ಧಟತನದಿಂದ ಪ್ರವಾದಿ ಮೂಸಾರನ್ನು ನಿಷೇಧಿಸಿದನು. ಮಾತ್ರವಲ್ಲ ಮೂಸಾರಲ್ಲಿ ವಿಶ್ವಾಸವಿಟ್ಟವರನ್ನೇ ಕಠೋರವಾಗಿ ಹಿಂಸಿಸಿದನು. ಆತನು ಅವರಿಗೆ ಬೆದರಿಕೆ ಹಾಕಿದನು.

"ನಿಮ್ಮ ಕೈಕಾಲುಗಳನ್ನು ವಿರುದ್ಧ ದಿಕ್ಕಿನಲ್ಲಿ ಕತ್ತರಿಸಿ ನಾನು ನಿಮ್ಮನ್ನು ಖರ್ಜೂರದ ಮರಕ್ಕೆ ನೇತು ಹಾಕುತ್ತೇನೆ."

ಆದರೆ ವಿಶ್ವಾಸಿಗಳು ಫಿರ್‌ಔನನ ಬೆದರಿಕೆಗಳಿಗೆ ಮಣಿಯಲಿಲ್ಲ. ಅವರು ಧೈರ್ಯವಾಗಿ ಸಾರಿದರು: "ನಮ್ಮನ್ನು ಸೃಷ್ಟಿಸಿದ ದೇವನಾಣೆ, ನಮಗೆ ಸ್ಪಷ್ಟ ದೃಷ್ಟಾಂತವು ಲಭಿಸಿರುವುದರಿಂದ ನಿನ್ನನ್ನು ಒಪ್ಪಲು ಸರ್ವಥಾ ಸಿದ್ಧರಿಲ್ಲ. ನಿನಗೆ ಇಷ್ಟ ಬಂದಂತೆ ಮಾಡು, ಹೆಚ್ಚೆಂದರೆ ನಿನ್ನ ಆಜ್ಞೆಯು ಈ ಲೋಕದಲ್ಲಿ ಮಾತ್ರ ನಡೆದೀತು. ನಾವು ನಮ್ಮ ಪ್ರಭುವಿನಲ್ಲಿ ವಿಶ್ವಾಸವಿರಿಸಿದ್ದೇವೆ. ಆತನು ನಮ್ಮ ಪಾಪಗಳನ್ನು ಕ್ಷಮಿಸಲಿ ಅಲ್ಲಾಹನೇ ಸರ್ವಶ್ರೇಷ್ಠನು, ಚಿರಂತನನು."

ಪ್ರವಾದಿ ಮೂಸಾ ಮತ್ತು ಅವರ ಅನುಯಾಯಿಗಳನ್ನು ಫಿರ್‌ಔನ್ ನಿರಂತರ ಪೀಡಿಸುತ್ತಿದ್ದನು. ಆದರೆ ತನ್ಮಧ್ಯೆ ಆತನ ಅರಮನೆಯಲ್ಲಿ ಕೆಲವು ಅಪೂರ್ವ ಘಟನೆಗಳು ನಡೆದವು. ಆತನ ಪತ್ನಿಯು ಸನ್ಮಾರ್ಗ ಸ್ವೀಕರಿಸಿದರು. ಆಸಿಯಾರು ಪ್ರವಾದಿ ಮೂಸಾರಲ್ಲಿಯೂ ಅವರು ಸಮರ್ಪಿಸಿದ ತತ್ವ ಸಿದ್ಧಾಂತಗಳಲ್ಲಿಯೂ ವಿಶ್ವಾಸವಿರಿಸಿದರು. ಇದು ಫಿರ್‌ಔನ್‌ನಿಗೆ ಅಸಹ್ಯವಾಯಿತು. ನಾನೇ ಪರಮಾಧಿಕಾರಿ, ನನ್ನ ಆಜ್ಞೆಗಳನ್ನು ಯಾರೂ ಮೀರಬಾರದೆಂಬ ಫಿರ್‌ಔನ್‌ನ ಉದ್ಧಟತನಕ್ಕೆ ರಾಣಿಯ ಧೋರಣೆಯು ದೊಡ್ಡ ಸವಾಲಾಗಿತ್ತು. ತನ್ನ ಮತ್ತು ಪೂರ್ವಜರ ನಿಲುಮೆಗಳನ್ನು ವಿರೋಧಿಸುತ್ತಿದ್ದ ಪ್ರವಾದಿ ಮೂಸಾ ಹಾಗೂ ಅವರ ಬೆಂಬಲಿಗರನ್ನು ಕಠಿಣವಾಗಿ ಹಿಂಸಿಸುತ್ತಿದ್ದ ಫಿರ್‌ಔನ್‌ನಿಗೆ, ಸ್ವಕುಟುಂಬದವರ ತಾತ್ಸಾರವನ್ನು ಸಹಿಸಲಾಗುತ್ತಿರಲಿಲ್ಲ. ಆದ್ದರಿಂದ ಆಸಿಯಾರ ಮನವೊಲಿಸಲು ಆತ ಆದಷ್ಟು ಪ್ರಯತ್ನಿಸಿದ್ದ. ಹಲವು ರೀತಿಯ ಆಮಿಷಗಳನ್ನು ತೋರಿಸಿದ. ಆದರೆ ಎಲ್ಲವೂ ವಿಫಲವಾಯಿತು. ಕ್ರೂರವಾಗಿ ಹಿಂಸಿಸಲಾರಂಭಿಸಿದ. ಕ್ರೂರವಾಗಿ ಮರ್ದಿಸಿದ. ದೈಹಿಕ ಹಿಂಸೆಗಳಿಂದ ಆಸಿಯಾರನ್ನು ಹಿಂಜರಿಸುವ ಆತನ ಪ್ರಯತ್ನವೂ ಯಶಸ್ವಿಯಾಗಲಿಲ್ಲ. ತಾವು ಮೆಚ್ಚಿದ ವಿಷಯಗಳಿಗಾಗಿ ಜನರು ಎಂತಹ ತ್ಯಾಗಗಳಿಗೂ ಸಿದ್ಧರಾಗುತ್ತಾರೆ. ತಾಯಿಯು ಮಕ್ಕಳಿಗಾಗಿ ಅವರ್ಣನೀಯ ಕಷ್ಟಗಳನ್ನು ಸಹಿಸುತ್ತಾಳೆ. ಆ ತನಕ ಪತಿ, ಅರಮನೆ ಹಾಗೂ ಅಲ್ಲಿನ ಸುಖ ಸೌಲಭ್ಯಗಳನ್ನು ಪ್ರೀತಿಸುತ್ತಿದ್ದ ಆಸಿಯಾರು, ಪ್ರವಾದಿ ಮೂಸಾರು ತೋರಿದ ಸನ್ಮಾರ್ಗದತ್ತ ಆಕರ್ಷಿತರಾದ ಬಳಿಕ, ಅದರ ಸ್ವೀಕಾರದಿಂದ ದೊರೆಯುವ ಶಾಶ್ವತ ಸ್ವರ್ಗದ ಬಗ್ಗೆ ಅವರಿಗೆ ಪ್ರೀತಿ ಹೆಚ್ಚಿತು. ತನ್ನಿಮಿತ್ತ ಅಧರ್ಮ ಮತ್ತು ಅನ್ಯಾಯದ ಪ್ರತೀಕವಾಗಿದ್ದ ಪ್ರಿಯತಮ ಫಿರ್‌ಔನ್‌ನಿಂದ ಮಾನಸಿಕವಾಗಿ ದೂರ ಸರಿದರು. ಆತನ ಅಕ್ರಮ ಮರ್ದನಗಳು ಅದನ್ನು ಮತ್ತಷ್ಟು ತೀವ್ರಗೊಳಿಸಿತು.

ಆಸಿಯಾರು ಪತಿ ಹಾಗೂ ಆತನ ಸಂಗಡಿಗರ ಎಲ್ಲ ಕ್ರೌರ್ಯಗಳನ್ನು ಸಹಿಸಿದರು. ಹಿಂಸೆಗಳನ್ನು ತಾಳ್ಮೆಯಿಂದ ಎದುರಿಸಿದರು. ಮರಣೋತ್ತರ ಜೀವನದ ಶಿಕ್ಷೆಗೆ ಹೋಲಿಸಿದಾಗ ಇದು ತೀರಾ ಕ್ಷುಲ್ಲಕವೆಂದು ಅವರಿಗೆ ಭಾಸವಾಯಿತು. ಫಿರ್‌ಔನ್‌ನ ಅರಮನೆ ಹಾಗೂ ಅದರ ಐಷಾರಾಮ ಆಡಂಬರಗಳು ಸ್ವರ್ಗ ಸುಖದ ಮುಂದೆ ಕ್ಷುಲ್ಲಕವೆಂದು ಅವರಿಗೆ ಮನವರಿಕೆಯಾಯಿತು. ಆದ್ದರಿಂದ ಆ ಸುಖ ವೈಭೋಗ ಗಳೆಲ್ಲವನ್ನು ಅವರು ಪರಿತ್ಯಜಿಸಲು ಸಿದ್ಧರಾದರು. ಕೊನೆಗೆ ಹಿಂಸೆ ತಾಳಲಾರದೆ ಅವರು ಅಲ್ಲಾಹನೊಡನೆ ಹೀಗೆಂದು ಪ್ರಾರ್ಥಿಸಿದರು: "ಪ್ರಭೂ! ನನಗೆ ಸ್ವರ್ಗದಲ್ಲಿ ನಿನ್ನ ಬಳಿ ಒಂದು ಮನೆ ನೀಡು! ಫಿರ್‌ಔನ್ ಮತ್ತು ಆತನ ಕೃತ್ಯಗಳಿಂದ ನನ್ನನ್ನು ರಕ್ಷಿಸು."

ಹೀಗೆ ಆಸಿಯಾರು ಸತ್ಯ ಮತ್ತು ಸನ್ಮಾರ್ಗಕ್ಕೆ ಸರ್ವೋಚ್ಚ ಸ್ಥಾನ ನೀಡಿದರು. ಅದರಿಂದಾಗಿ ಬಂದ ವಿಪತ್ತುಗಳೆಲ್ಲವನ್ನೂ ಸಂತೋಷದಿಂದ ಅನುಭವಿಸಿದರು. ಭೂಮಿಯಲ್ಲಿ ದೊರೆತ ಸುಖ ಸೌಲಭ್ಯಗಳನ್ನು ತೊರೆದರು. ಈಜಿಪ್ಟನ್ನು ಆಳುತ್ತಿದ್ದ

ಫಿರ್‌ಔನ್‌ನ ಸರ್ವಾಧಿಪತ್ಯಕ್ಕೆ ಸವಾಲು ಹಾಕಿದರು. ಪತಿಗೆ ವಿರುದ್ಧವಾಗಿ ಪ್ರಾರ್ಥಿಸಿ ಕ್ರಿಯಾಶೀಲರಾದರು. ಹೀಗೆ ಫಿರ್‌ಔನ್‌ನ ಅರಮನೆಯಲ್ಲಿ ಉಜ್ವಲ ಕ್ರಾಂತಿಯನ್ನು ನಡೆಸಿದ ಆ ವೀರ ಮಹಿಳೆಯನ್ನು ಕುರ್‌ಆನ್ ಬಹಳವಾಗಿ ಪ್ರಶಂಸಿಸಿದೆ. ಲೋಕಾಂತ್ಯದ ವರೆಗಿನ ಸಜ್ಜನರಿಗೆ ಮಾದರಿಯಾಗಿ ಎತ್ತಿ ತೋರಿಸಿದೆ. ಅವರು ಮಾನವೇತಿಹಾಸ ದಲ್ಲಿಯೇ ಅಜರಾಮರರಾದರು.

"ಸತ್ಯವಿಶ್ವಾಸಿಗಳಿಗೆ ಫಿರ್‌ಔನ್‌ನ ಪತ್ನಿಯನ್ನು ಅಲ್ಲಾಹನು ಮಾದರಿಯಾಗಿ ಮುಂದಿರಿಸಿದ್ದಾನೆ." (ಪವಿತ್ರ ಕುರ್‌ಆನ್, 66:11)

---

# ಪ್ರವಾದಿವರ್ಯರಿಗೆ(ಸ) ಧೈರ್ಯ ನೀಡಿದ ವೀರ ಮಹಿಳೆ

"ಪ್ರಿಯರೇ ಸಂತುಷ್ಟರಾಗಿರಿ ದೃಢ ಚಿತ್ತರಾಗಿ! ನನ್ನ ಆತ್ಮವು ಯಾರ ಹಸ್ತದಲ್ಲಿದೆಯೋ ಆತನಾಣೆ, ನೀವು ಈ ಸಮುದಾಯದ ಪ್ರವಾದಿಯಾಗುವಿರೆಂದು ನಾನು ಖಚಿತವಾಗಿ ನಿರೀಕ್ಷಿಸುತ್ತೇನೆ, ಖಂಡಿತವಾಗಿಯೂ ಅಲ್ಲಾಹನು ನಿಮ್ಮನ್ನು ಎಂದೆಂದಿಗೂ ಅಪಮಾನಿಸ ಲಾರನು. ನೀವು ಕುಟುಂಬದವರನ್ನು ಪ್ರೀತಿಸುತ್ತೀರಿ. ಸತ್ಯವನ್ನೇ ಹೇಳುತ್ತೀರಿ. ನಿರಾಶ್ರಿತರಿಗೆ ನೆರವಾಗುತ್ತೀರಿ. ಅತಿಥಿಗಳನ್ನು ಸತ್ಕರಿಸುತ್ತೀರಿ. ಸತ್ಯದ ವಿಜಯಕ್ಕಾಗಿ ಶ್ರಮಿಸುತ್ತೀರಿ."

ಈ ಮಾತುಗಳನ್ನು ಕೇಳಿದ ಪ್ರವಾದಿವರ್ಯರ(ಸ) ಮನಸ್ಸಿಗೆ ಸಮಾಧಾನ ವಾಯಿತು, ಅದಕ್ಕಿಂತ ಮುಂಚೆ ಅವರು ಸಂಪೂರ್ಣ ವ್ಯಾಕುಲಚಿತ್ತರಾಗಿದ್ದರು, ಹೆದರಿ ನಡುಗುತ್ತಿದ್ದರು. 'ನನಗೆ ಹೊದಿಸಿರಿ' ಎನ್ನುತ್ತಾ ಅವರು ಮನೆಯೊಳಕ್ಕೆ ಪ್ರವೇಶಿಸಿದ್ದರು. ದೇಹವಿಡೀ ಜ್ವರಬಾಧಿಸಿದಂತೆ ಗಡಗಡನೆ ನಡುಗುತ್ತಿತ್ತು. ಹೃದಯವು ಜೋರಾಗಿ ಬಡಿಯುತ್ತಿತ್ತು.

ಎಂತಹ ಧೀರನನ್ನೂ ನಡುಗಿಸುವಂತಹ ಸ್ಥಿತಿಯನ್ನು ಅವರು ಅನುಭವಿಸಿದ್ದರು. ಹಿರಾ ಗುಹೆಯಲ್ಲಿದ್ದಾಗ ಕೈಯಲ್ಲೊಂದು ಕಡತ ಹಿಡಿದಿದ್ದ ದೇವಚರ ಅವರ ಬಳಿ ಬಂದರು. ತರುವಾಯ ಓದುವಂತೆ ಆಜ್ಞಾಪಿಸಿದರು. ಪ್ರವಾದಿಯವರು(ಸ) ನನಗೆ ಓದು ಬರುವುದಿಲ್ಲವೆಂದು ಹೇಳಿದರು. ಆಗ ದೇವಚರರು ಅವರನ್ನು ಬಿಗಿಯಾಗಿ ಅಪ್ಪಿಹಿಡಿದು ಕೊಂಡರು. ತರುವಾಯ ಬಿಗಿ ಸಡಿಲಿಸಿ ಪುನಃ 'ಓದು' ಎಂದು ತಿಳಿಸಿದರು. ಪ್ರವಾದಿಯವರು(ಸ) 'ನನಗೆ ಓದು ಬರುವುದಿಲ್ಲ'ವೆಂದು ಪುನಃ ಹೇಳಿದರು, ಮೂರು ಬಾರಿ ಇದು ಪುನರಾವರ್ತನೆಗೊಂಡಿತು.

"ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ. ಅವನು ಹೆಪ್ಪುಗಟ್ಟಿದ ರಕ್ತದ ಒಂದು ಪಿಂಡದಿಂದ ಮಾನವನನ್ನು ಸೃಷ್ಟಿಸಿದನು. ಓದಿರಿ ಮತ್ತು ನಿಮ್ಮ ಪ್ರಭು ಮಹಾ ಉದಾರಿ. ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು. ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯಪಾಲಿಸಿದನು" ಎಂದು ದೇವಚರ ಓದಿ ಹೇಳಿತು.

ಈ ಘಟನೆಯು ಅವರನ್ನು ಸ್ತಂಭೀಭೂತಗೊಳಿಸಿತು. ಭಯದಿಂದ ನಡುಗುತ್ತಾ ಮನೆಗೆ ಬಂದ ಪ್ರವಾದಿಯವರಿಗೆ(ಸ) ಖದೀಜಾ ಕಂಬಳಿ ಹೊದಿಸಿದರು. ಸ್ವಲ್ಪ ಸಮಯದ ಬಳಿಕ ಅವರು ಹಿರಾ ಗುಹೆಯಲ್ಲಿ ಸಂಭವಿಸಿದ ಘಟನೆಗಳನ್ನು ವಿವರಿಸಿದರು. ಎಲ್ಲವನ್ನೂ ಆಲಿಸಿದ ಬಳಿಕ ಖದೀಜಾ(ರ) ಅವರನ್ನು ಸಮಾಧಾನಪಡಿಸಿದರು. ಅವರು ಕಿಂಚಿತ್ತೂ ಭಯ ವ್ಯಕ್ತಪಡಿಸಲಿಲ್ಲ.

ಪ್ರವಾದಿ ಮುಹಮ್ಮದ್(ಸ) ಚೆನ್ನಾಗಿ ನಿದ್ರಿಸಿದರು. ಖದೀಜಾರು(ರ) ಅವರ ವದನವನ್ನೇ ಎವೆಯಿಕ್ಕದೆ ವೀಕ್ಷಿಸುತ್ತಿದ್ದರು. ನಡೆದ ಘಟನೆಗಳ ವಾಸ್ತವಿಕತೆಯನ್ನು ತಿಳಿಯಲು ಅವರು ಕಾತರರಾಗಿದ್ದರು. ಪತಿಯನ್ನು ಸಮಾಧಾನಪಡಿಸಲಿಕ್ಕಾಗಿ ಕೆಲವೊಂದು ಮಾತುಗಳನ್ನೂ ಹೇಳಿದ್ದರೂ ಅದರ ವಸ್ತುಸ್ಥಿತಿಯೇನೆಂದು ಅವರಿಗೆ ತಿಳಿದಿರಲಿಲ್ಲ. ಆದ್ದರಿಂದ ಆಪ್ತ ಸಂಬಂಧಿಕ (ಚಿಕ್ಕಪ್ಪನ ಮಗ) ಹಾಗೂ ಖ್ಯಾತ ವಿದ್ವಾಂಸರಾಗಿದ್ದ ವರಕಃ ಬಿನ್ ನೌಫಲ್‌ರ ಬಳಿ ಹೋಗಿ ನಡೆದ ಘಟನೆಯನ್ನು ವಿವರಿಸಿದರು. ಸ್ವಲ್ಪ ಹೊತ್ತು ಮುಖ ಕೆಳಗೆ ಹಾಕಿ ಆಲೋಚಿಸಿದ ಬಳಿಕ ಅವರು ಹೀಗೆಂದರು: "ಪವಿತ್ರ ಆತ್ಮ! ಪವಿತ್ರ ಆತ್ಮ! ವರಕಃ ಬಿನ್ ನೌಫಲ್‌ನ ಆತ್ಮವು ಯಾರ ಹಸ್ತದಲ್ಲಿದೆಯೋ ಆತನಾಣೆ, ಖದೀಜಾ! ನೀನು ಹೇಳಿದ್ದು ನಿಜವಾಗಿದ್ದರೆ, ಅವರ ಬಳಿಗೆ ಪ್ರವಾದಿ ಮೂಸಾರ ಬಳಿ ಬಂದಿದ್ದ ದೇವಚರನೇ ಬಂದಿದೆ, ಅವರು ಈ ಜನತೆಯ ಪ್ರವಾದಿ ಯೆಂಬುದು ಖಚಿತ. ಆದ್ದರಿಂದ ದೃಢಚಿತ್ತರಾಗಿರುವಂತೆ ಅವರಿಗೆ ತಿಳಿಸಿರಿ."

ಖದೀಜಾರು(ರ) ಮನೆಗೆ ಹಿಂತಿರುಗಿದರು. ಆಗಲೂ ಪ್ರವಾದಿಯವರು(ಸ) ನಿದ್ರಾಧೀನರಾಗಿದ್ದರು. ಆದ್ದರಿಂದ ಈ ಶುಭವಾರ್ತೆಯನ್ನು ತಿಳಿಸುವುದಕ್ಕಾಗಿ ಅವರಿಗೆ ಎಚ್ಚರವಾಗುವ ತನಕ ಕಾದು ನಿಂತರು. ವರಕಃ ಹೇಳಿದ ವಿಷಯಗಳನ್ನು ತಿಳಿಸಿದ ಬಳಿಕ ಪತಿಯ ಪ್ರವಾದಿತ್ವದಲ್ಲಿ ತಾನು ವಿಶ್ವಾಸವಿರಿಸುವುದಾಗಿ ಸಾರಿದರು.

ಖದೀಜಾರು(ರ) 15 ವರ್ಷಗಳ ಹಿಂದೆ ಮುಹಮ್ಮದ್‌ರ(ಸ) ಜೀವನದಲ್ಲಿ ಪ್ರವೇಶಿಸಿದ್ದರು. ಅಂದು ಅವರು ಶ್ರೀಮಂತ ವ್ಯಾಪಾರಸ್ಥೆಯಾಗಿದ್ದರು. ನಲ್ವತ್ತು ವಯಸ್ಸಿನ ವಿಧವೆ. ಎರಡು ಮಕ್ಕಳ ತಾಯಿ, ಮಗಳು ಹಾಲ ಮತ್ತು ಮಗ ಹಿಂದ್. ಮೊದಲ ಪತಿ ಅಬೂಹಾಲ ಬಿನ್ ಸುರಾ ಆ ಮಕ್ಕಳ ತಂದೆ. ಅವರ ಮರಣದ ಬಳಿಕ ಅತೀಕ್ ಬಿನ್ ಆಇದ್ ಅವರನ್ನು ವಿವಾಹವಾದರು. ಆ ದಾಂಪತ್ಯವೂ ಹೆಚ್ಚು ಕಾಲ ಉಳಿಯಲಿಲ್ಲ.

ತಂದೆ ಖುವೈಲಿದ್ ಹಾಗೂ ಮತ್ತಿತರರ ನೆರವಿನಿಂದ ಖದೀಜಾ(ರ) ವ್ಯಾಪಾರ ನಡೆಸುತ್ತಿದ್ದರು. ಹಲವು ಶ್ರೀಮಂತ ಕುಲೀನ ಕುರೈಶಿ ಗಣ್ಯರು ಅವರೊಂದಿಗೆ ವಿವಾಹ ಪ್ರಸ್ತಾಪ ನಡೆಸಿದರು. ಆದರೆ ಅವರು ಆ ಎಲ್ಲಾ ಪ್ರಸ್ತಾಪಗಳನ್ನು ತಿರಸ್ಕರಿಸಿದರು. ಏಕೆಂದರೆ ಅವರಿಗೆ ತನಗಿಂತ ತನ್ನ ಸಂಪತ್ತೇ ಪ್ರಧಾನವಾಗಿದೆಯೆಂದು ಒಖದೀಜಾ ಚೆನ್ನಾಗಿ ಅರಿತಿದ್ದರು.

ತನ್ನ ವ್ಯಾಪಾರಕ್ಕಾಗಿ ಅವರು ಜನರನ್ನು ನೇಮಿಸುತ್ತಿದ್ದರು. ಕುರೈಶಿ ಗೋತ್ರದಲ್ಲಿ ಅಂತಹ ಪ್ರಾಮಾಣಿಕ ವ್ಯಕ್ತಿಗಾಗಿ ಖದೀಜಾ ವಿಚಾರಿಸುತ್ತಿರುವರೆಂದು ಮುಹಮ್ಮದ್‌ರ(ಸ) ಚಿಕ್ಕಪ್ಪ ಅಬೂತಾಲಿಬ್‌ರಿಗೆ ತಿಳಿಯಿತು. ಆದ್ದರಿಂದ ಅವರು ಸಹೋದರ ಪುತ್ರನಿಗೆ ಈ ವಿಷಯ ತಿಳಿಸಿದರು: "ಮಗನೇ! ನಾನು ಬಡವ. ಕಾಲವು ನನಗೆ ವಿರುದ್ಧವಾಗಿದೆ. ವ್ಯಾಪಾರಕ್ಕೆ ಕಳುಹಿಸಲು ಖದೀಜಾರಿಗೆ ಜನ ಬೇಕೆಂದು ತಿಳಿಯಿತು. ಅದಕ್ಕೆ ಪ್ರತಿಫಲವಾಗಿ ಅವರು ಎರಡು ಒಂಟೆಗಳನ್ನು ಕೊಡುತ್ತಾರಂತೆ. ಆದರೆ ನಿನ್ನ ಮಟ್ಟಿಗೆ ಅದು ಸಾಲದು. ನಾನು ಆಕೆಯೊಡನೆ ಮಾತಾಡಲೇ?"

"ನಿಮ್ಮಿಷ್ಟದಂತೆ ಆಗಲಿ," ಪ್ರವಾದಿ(ಸ) ಹೇಳಿದರು.

ಅಬೂತಾಲಿಬ್‌ರು ಖದೀಜಾರ ಬಳಿ ಹೋಗಿ ಹೇಳಿದರು: "ನಿನ್ನ ವ್ಯಾಪಾರಕ್ಕೆ ಮುಹಮ್ಮದ್‌ನನ್ನು ಕಳುಹಿಸಿಕೊಡುತ್ತೇವೆ. ಪ್ರತಿಫಲವಾಗಿ ಎರಡು ಒಂಟೆ ಕೊಡುವುದಾಗಿ ತಿಳಿಯಿತು. ಆದರೆ ಮುಹಮ್ಮದ್‌ನಿಗೆ ಅದು ಸಾಕಾಗದು. ಆತನಿಗೆ ನಾಲ್ಕು ಒಂಟೆಯಾದರೂ ನೀಡಬೇಕು."

"ಒಬ್ಬ ಅಪರಿಚಿತ ವ್ಯಕ್ತಿಯ ಮಟ್ಟಿಗೂ ನಾನು ನಿಮ್ಮ ಬೇಡಿಕೆಯನ್ನು ಒಪ್ಪಲು ಸಿದ್ಧಳಿದ್ದೇನೆ. ಹಾಗಿರುತ್ತಾ, ನಿಮ್ಮ ನಿಕಟ ಸಂಬಂಧಿಕನ ವಿಷಯದಲ್ಲಿ ಹೇಳಲಿಕ್ಕೇನಿದೆ?" ಎಂದು ಖದೀಜಾ ಒಪ್ಪಿದರು.

ಚಿಕ್ಕಪ್ಪನ ಆದೇಶದಂತೆ ಮುಹಮ್ಮದ್‌ರವರು(ಸ) ಖದೀಜಾರ ವ್ಯಾಪಾರ ಸರಕುಗಳನ್ನು ಅವರ ಗುಲಾಮ ಮೈಸರನ ಜತೆಗೂಡಿ ಸಿರಿಯಾಕ್ಕೆ ಸಾಗಿಸಿದರು. ಆ ಪ್ರಯಾಣವು ಬಹಳ ಯಶಸ್ವಿಯಾಯಿತು. ಎಂದಿಗಿಂತ ಹೆಚ್ಚು ಲಾಭ ದೊರೆಯಿತು. ಮುಹಮ್ಮದ್‌ರ(ಸ) ಚಾತುರ್ಯ ಮತ್ತು ಪ್ರಾಮಾಣಿಕತೆಯೇ ಅದಕ್ಕೆ ಕಾರಣವಾಗಿತ್ತು. ಅವರ ನಿಷ್ಕಳಂಕ ಗುಣನಡತೆಯು ಮೈಸರರಿಗೆ ತುಂಬಾ ಇಷ್ಟವಾಯಿತು. ಮಕ್ಕಾಕೆ ಹತ್ತಿರವಾದಾಗ ಅವರು ಮುಹಮ್ಮದ್‌ರೊಡನೆ(ಸ) ಹೀಗೆಂದರು:

"ಮುಹಮ್ಮದ್, ನೀವು ಕೂಡಲೇ ಖದೀಜಾರ ಬಳಿಗೆ ಹೋಗಿರಿ, ನಿಮ್ಮ ಮೂಲಕ ಅಲ್ಲಾಹನು ಅವರಿಗೆ ನೀಡಿರುವ ಲಾಭವನ್ನು ತಿಳಿಸಿರಿ, ಅವರು ಅಧಿಕ ಪ್ರತಿಫಲ ನೀಡಬಹುದು."

ಮುಹಮ್ಮದ್(ಸ) ಅವರು ಆಗಮಿಸುವಾಗ ಖದೀಜಾ(ರ) ಮನೆಯ ಮಾಳಿಗೆಯಲ್ಲಿದ್ದರು. ಒಂಟೆಯಲ್ಲಿ ಬರುವ ಮುಹಮ್ಮದ್‌ರನ್ನು(ಸ) ನೋಡಿದ ಕೂಡಲೇ

ಅವರು ಕೆಳಗಿಳಿದು ಬಂದು ಅವರನ್ನು ಸ್ವಾಗತಿಸಿದರು. ಪಯಣ ಮತ್ತು ವ್ಯಾಪಾರದ ಬಗ್ಗೆ ಎಲ್ಲವನ್ನು ತಿಳಿದುಕೊಂಡರು. ಸ್ವಲ್ಪ ಸಮಯದ ಬಳಿಕ ಮೈಸರ ಅಲ್ಲಿಗೆ ತಲುಪಿದರು. ತರುವಾಯ ಅವರು ಹೇಳಿದ ವಿವರಣೆಗಳಿಂದ ಅವರಿಗೆ ಮುಹಮ್ಮದ್‌ರ(ಸ) ಸದ್ಗುಣ ಸಂಪನ್ನತೆಯ ಸ್ಪಷ್ಟ ಅರಿವಾಯಿತು. ಇದರಿಂದ ಅವರ ಬಗ್ಗೆ ಪ್ರೀತ್ಯಾದರ ಹೆಚ್ಚಿತು. ಅದರೊಂದಿಗೆ ಅವರನ್ನು ವರಿಸಬೇಕೆಂಬ ಆಸೆಯೂ ಚಿಗುರಿತು. ಅವರು ಹೆಚ್ಚು ತಡಮಾಡದೆ ತನ್ನ ಇಂಗಿತವನ್ನು ಸೇವಕಿ ಮುನಯ್ಯಾಳ ಪುತ್ರಿ ನುಫೈಝಾಳಿಗೆ ತಿಳಿಸಿದರು. ನುಫೈಝಾಳು ಬಹಳ ಗುಪ್ತವಾಗಿ ಮುಹಮ್ಮದ್‌ರನ್ನು(ಸ) ಭೇಟಿ ಮಾಡಿ,

"ವಿವಾಹವಾಗಲು ನಿಮಗೆ ಅಡ್ಡಿಯೇನಿದೆ? ನೀವು ಇನ್ನೆಷ್ಟು ಕಾಲ ಹೀಗೆ ಒಂಟಿಯಾಗಿರುವಿರಿ?" ಎಂದು ಕೇಳಿದರು. ಅದಕ್ಕೆ ಪ್ರವಾದಿ ಮುಹಮ್ಮದ್: "ವಿವಾಹಕ್ಕೆ ಬೇಕಾದ ಅನುಕೂಲತೆ ನನ್ನ ಬಳಿಯಿಲ್ಲ" ಎಂದು ಹೇಳಿದರು.

"ಎಲ್ಲ ರೀತಿಯ ಆರ್ಥಿಕ ಹೊಣೆಗಾರಿಕೆಗಳಿಂದಲೂ ನಿಮ್ಮನ್ನು ಮುಕ್ತಗೊಳಿಸಿ ಸೌಂದರ್ಯ, ಸಂಪತ್ತು ಮತ್ತು ಕುಲೀನ ಮನೆತನದ ಹೆಣ್ಣು ಬಯಸಿದರೆ ನೀವು ಒಪ್ಪುವಿರಾ? ನುಫೈಝಾ ಪ್ರಶ್ನಿಸಿದರು.

"ಅಂತಹ ಹೆಣ್ಣು ಯಾರು?" ಪ್ರವಾದಿ(ಸ) ಕೇಳಿದರು.

"ಖದೀಜಾ- ಖುವೈಲಿದ್‌ರ ಪುತ್ರಿ."

"ಅದು ಹೇಗೆ ತಾನೇ ಸಾಧ್ಯ?" ಮುಹಮ್ಮದ್(ಸ) ಸಂದೇಹ ವ್ಯಕ್ತಪಡಿಸಿದರು. ಅವರಿಗೆ ಇಷ್ಟವಿದೆಯೆಂದರಿತ ನುಫೈಝಾ ಹೇಳಿದರು:

"ಅದನ್ನು ನನಗೆ ಬಿಟ್ಟುಬಿಡು."

ಹೀಗೆ 25 ವರ್ಷ ಪ್ರಾಯದ ಮುಹಮ್ಮದ್‌ರು(ಸ) ಖದೀಜಾರನ್ನು ವಿವಾಹವಾದರು. ವಿವಾಹಧನ 20 ಒಂಟೆಗಳು, ಆ ದಾಂಪತ್ಯ ಕುಡಿಯಲ್ಲಿ ಆರು ಕುಸುಮಗಳು ಅರಳಿದವು. ಈರ್ವರು ಪುತ್ರರು, ನಾಲ್ವರು ಪುತ್ರಿಯರು. ಕಾಸಿಮ್, ಅಬ್ದುಲ್ಲಾ, ರುಖಿಯ್ಯ, ಝೈನಬ್, ಉಮ್ಮುಕುಲ್ಸುಮ್ ಮತ್ತು ಫಾತಿಮಾ. ಮುಹಮ್ಮದ್(ಸ) ಮತ್ತು ಖದೀಜಾರನ್ನು ದುಃಖತಪ್ತಗೊಳಿಸಿ ಪುತ್ರರೀರ್ವರೂ ಚಿಕ್ಕಂದಿನಲ್ಲಿಯೇ ಮರಣ ಹೊಂದಿದರು.

ಅವರ ದಾಂಪತ್ಯ ಜೀವನವು ಸಂತೃಪ್ತವಾಗಿತ್ತು. ಖದೀಜಾರ ಪ್ರೇಮ-ವಾತ್ಸಲ್ಯಮಯ ನಡವಳಿಕೆಯು ಮುಹಮ್ಮದ್‌ರ(ಸ) ಅನಾಥ ಪ್ರಜ್ಞೆಯನ್ನು ಹೋಗಲಾಡಿಸಿತು. ಅವರು ನಿರ್ಮಲ, ಪ್ರೀತಿ ಮತ್ತು ನಿಷ್ಕಳಂಕ ಕರುಣೆಯ ಆಗರವಾಗಿದ್ದರು.

ಪ್ರವಾದಿತ್ವ ಪ್ರಾಪ್ತಿಯ ಬಳಿಕ ಅವರ ಜೀವನವು ಸಂಕಷ್ಟಮಯವಾಯಿತು. ವೈರಿಗಳು ಅವರನ್ನು ಕಠಿಣವಾಗಿ ಪೀಡಿಸಿದರು. ಆಹಾರವನ್ನು ತಡೆದರು. ಸಾಮಾಜಿಕ ಬಹಿಷ್ಕಾರ ಹೇರಿದರು. ಆದ್ದರಿಂದ ಸುಖ ಜೀವನಕ್ಕೆ ಒಗ್ಗಿ ಹೋಗಿದ್ದ ಖದೀಜಾ(ರ)

ಹಸಿವೆಯಿಂದ ದಿನದೂಡಬೇಕಾಯಿತು. ಸಮಾಜದ ನಿಂದನೆ-ವಿರೋಧಗಳನ್ನು ಅನುಭವಿಸ ಬೇಕಾಯಿತು. ಅವರು ಎಲ್ಲವನ್ನು ಸಂತೋಷದಿಂದ ಸಹಿಸಿದರು. ಮಾತ್ರವಲ್ಲ, ಪತಿಗೆ ಅಗತ್ಯವಿರುವ ಸ್ಫೂರ್ತಿ ಮತ್ತು ಹುಮ್ಮಸ್ಸು ನೀಡಿದರು. ತನ್ನ ಮಂದಸ್ಮಿತ ಮತ್ತು ಅನುಕಂಪದ ವರ್ತನೆಯಿಂದ ಪ್ರವಾದಿಯವರ ಕ್ಲಿಷ್ಟತೆಗಳನ್ನು ಹಗುರಗೊಳಿಸಿದರು. ದುಃಖವನ್ನು ಶಮನಗೊಳಿಸಿದರು.

ಖದೀಜಾ(ರ) ತನ್ನ ಸಂಪತ್ತೆಲ್ಲವನ್ನೂ ಇಸ್ಲಾಮಿನ ಹಾದಿಯಲ್ಲಿ ವ್ಯಯಿಸಲಿಕ್ಕಾಗಿ ಪತಿಗೆ ನೀಡಿದರು. ಎಲ್ಲ ಬಿಕ್ಕಟ್ಟಿನ ಪರಿಸ್ಥಿತಿಗಳಲ್ಲಿಯೂ ಪ್ರವಾದಿಯವರಿಗೆ(ಸ) ಬೆಂಬಲ ನೀಡಿದರು. ತನ್ಮೂಲಕ ತಾನು ಪ್ರವಾದಿವರ್ಯರ(ಸ) ಪ್ರಥಮ ಅನುಯಾಯಿ ಯೆಂದು, ಸಾರಿದಂತೆಯೇ ಆಚರಣೆಯಲ್ಲಿಯೂ ತೋರಿಸಿದರು.

ಅವರ 18 ವರ್ಷಗಳ ದಾಂಪತ್ಯ ಜೀವನದಲ್ಲಿ ಒಮ್ಮೆಯೂ ವಿರಸ ಉಂಟಾಗಲಿಲ್ಲ. ಪತ್ನಿಯ ಪ್ರತಿಯೊಂದು ವರ್ತನೆಯೂ ಪ್ರವಾದಿವರ್ಯರ(ಸ) ಸಂತೋಷವನ್ನು ಹೆಚ್ಚಿಸುತ್ತಿತ್ತು. ಅವರು ಪ್ರೀತಿ, ವಿಶ್ವಾಸ, ವಿನಯ, ಚಾರಿತ್ರ್ಯದಿಂದ ಪ್ರವಾದಿಯವರನ್ನು(ಸ) ಬೆಂಬಲಿಸಿದರು. ಭಯವನ್ನು ನೀಗಿಸಿದರು. ಹೊಣೆಯನ್ನು ಹಗುರ ಗೊಳಿಸಿದರು. ಆತ್ಮಸ್ಥೈರ್ಯ ತುಂಬಿದರು. ಅವರ ಅನುಕಂಪದ ನೋಟವು ಮನಸ್ಸಿಗೆ ನೆಮ್ಮದಿಯನ್ನು ನೀಡುತ್ತಿತ್ತು.

ಹಿಜ್ರತ್‌ಗಿಂತ ಮೂರು ವರ್ಷ ಮುಂಚೆ ಖದೀಜಾ ನಿಧನರಾದರು. ಅವರ ವಿದಾಯದಿಂದ ಪ್ರವಾದಿಯವರಿಗೆ(ಸ) ಭಾರೀ ಆಘಾತವಾಯಿತು. ಆ ಬಳಿಕ ಹಲವರು ಅವರ ಜೀವನ ಸಂಗಾತಿಗಳಾಗಿದ್ದರೂ ಯಾರೂ ಖದೀಜಾರಷ್ಟು ಪ್ರಭಾವ ಬೀರಲಿಲ್ಲ. ಅವರು ಹಲವೊಮ್ಮೆ ಹೀಗೆ ಹೇಳುತ್ತಿದ್ದರು: "ಖದೀಜಾರೊಂದಿಗಿನ ಪ್ರೀತಿಯು ನನ್ನಲ್ಲಿ ಅಮರವಾಗಿದೆ."

---

# ಎರಡು ಪಟ್ಟೆಯುವಳು

**ಗು**ಹೆಯಲ್ಲಿ ಮೂರುದಿನ ತಂಗಿದ ಬಳಿಕ ಪ್ರವಾದಿ ಮುಹಮ್ಮದ್(ಸ) ಮತ್ತು ಜತೆಗಾರ ಅಬೂಬಕರ್(ರ) ಹೊರಬಂದರು. ಅವರು ಪಯಣಕ್ಕೆ ಸಜ್ಜಾದರು. ಯಸ್ರಿಬ್ ಅವರ ಗುರಿಯಾಗಿತ್ತು. ಇತರ ಮುಸ್ಲಿಮರು ಆದಾಗಲೇ ಅಲ್ಲಿಗೆ ತಲುಪಿದ್ದರು. ಅವರು ಊರು ಬಿಟ್ಟಿದ್ದರಿಂದ ಮಕ್ಕಾದ ವೈರಿಗಳ ಕೋಪ ಹೆಚ್ಚಿತು. ಅವರು ಪ್ರವಾದಿ ಯವರನ್ನು(ಸ) ವಧಿಸುವ ಸಂಚು ಹೂಡಿದರು. ಯಸ್ರಿಬ್‌ನ ಅನೇಕ ಗಣ್ಯರು ಇಸ್ಲಾಮ್ ಸ್ವೀಕರಿಸಿದ್ದರು. ಮಕ್ಕಾದ ಮುಸ್ಲಿಮರೂ ಅಲ್ಲಿಗೆ ತಲುಪಿದ್ದರು. ಮುಹಮ್ಮದರೂ

ಅವರ ಜತೆಗೂಡಿದರೆ ನಮಗೆ ಉಳಿಗಾಲವಿಲ್ಲವೆಂದು ವೈರಿಗಳು ಭಾವಿಸಿದರು. ಆದ್ದರಿಂದ ಅವರನ್ನು ಕೊಲ್ಲುವ ಒಳಸಂಚು ನಡೆಸಿದರು. ಅದಕ್ಕಾಗಿ ಎಲ್ಲ ಗೋತ್ರ ಗಳಿಂದ ಒಬ್ಬೊಬ್ಬ ಯುವಕರನ್ನು ಆಯ್ಕೆ ಮಾಡಿದರು. ಅವರಿಗೆ ಹರಿತವಾದ ಖಡ್ಗಗಳನ್ನು ನೀಡಿದರು. ಎಲ್ಲರೂ ಒಮ್ಮೆಲೆ ಮುಗಿ ಬಿದ್ದು ಪ್ರವಾದಿಯವರನ್ನು(ಸ) ಮುಗಿಸಿ ಬಿಡಲು ನಿರ್ಧರಿಸಿದರು. ಹೀಗೆ ಅವರ ಮನೆಯನ್ನು ಸುತ್ತುವರಿದರು. ಆದರೆ ಅವರಿಗೆ ತಿಳಿಯದಂತೆ ಪ್ರವಾದಿಯವರು(ಸ) ಅಲ್ಲಿಂದ ವಿಸ್ಮಯಕರವಾಗಿ ಪಾರಾದರು. ತಮ್ಮ ಆಪ್ತಮಿತ್ರ ಅಬೂಬಕರ್‌ರ(ರ) ಜತೆ 'ಸೌರ್' ಗುಹೆಯಲ್ಲಿ ಅಭಯ ಪಡೆದರು.

ಬೆಳಗಾತ ವೈರಿಗಳಿಗೆ ಪ್ರವಾದಿವರ್ಯರು(ಸ) ಕಾಣಿಸಲಿಲ್ಲ. ಅವರು ಪ್ರವಾದಿ ಯವರ(ಸ) ಹುಡುಕಾಟಕ್ಕೆ ತೊಡಗಿದರು. ಏನೂ ಪ್ರಯೋಜನವಾಗಲಿಲ್ಲ. ಅವರು ನಿರಾಶರಾಗಿ ಪ್ರವಾದಿವರ್ಯರ(ಸ) ತಲೆಗೆ 100 ಒಂಟೆಗಳ ಬಹುಮಾನ ಸಾರಿದರು. ಅವರು ಹುಡುಕುತ್ತಾ ಪ್ರವಾದಿಯವರಿದ್ದ(ಸ) 'ಸೌರ್' ಗುಹೆಯ ಬಳಿ ಬಂದರು. ಆದರೆ ಅವರು ಗುಹೆಯ ಒಳಗೆ ನೋಡಲಿಲ್ಲ. ಏಕೆಂದರೆ ಗುಹೆಯ ಬಾಗಿಲಲ್ಲಿ ಜೇಡನ ಬಲೆ ಆವರಿಸಿತ್ತು. ಹಾಗೆಯೇ ಮರದ ಬೇರುಗಳೂ ವ್ಯಾಪಿಸಿದ್ದವು.

ಅವರು ಗುಹೆಯಲ್ಲಿರುವರೆಂದು ಯಾರಿಗೂ ತಿಳಿದಿರಲಿಲ್ಲ. ಅಬೂಬಕರ್‌ರ(ರ) ಪುತ್ರ ಅಬ್ದುಲ್ಲಾ, ಪುತ್ರಿಯರಾದ ಅಸ್ಮಾ, ಆಯಿಶಾ ಮತ್ತು ಸೇವಕ ಆಮಿರ್‌ರಿಗೆ ಮಾತ್ರ ಈ ವಿಷಯ ತಿಳಿದಿತ್ತು. ಅಬ್ದುಲ್ಲಾರು ಹಗಲಿಡೀ ವೈರಿಗಳ ಗೂಢಾಲೋಚನೆಯ ಮಾಹಿತಿ ಸಂಗ್ರಹಿಸಿ ಪ್ರವಾದಿವರ್ಯರಿಗೆ(ಸ) ಮುಟ್ಟಿಸುತ್ತಿದ್ದರು. ಆಮಿರ್ ಹಗಲು ಆಡು ಮೇಯಿಸುತ್ತಾ ಸಂಜೆ ಹಾಲು ಮತ್ತು ಮಾಂಸವನ್ನು ಗುಹೆಗೆ ತಲುಪಿಸು ತ್ತಿದ್ದರು. ಅಸ್ಮಾ(ರ) ರಾತ್ರಿಯ ಆಹಾರ ತಂದು ಕೊಡುತ್ತಿದ್ದರು.

ಮೂರು ದಿನಗಳ ಹುಡುಕಾಟದಿಂದ ವೈರಿಗಳು ನಿರಾಶರಾಗಿ ಆ ಪ್ರಯತ್ನವನ್ನು ತೊರೆದರು. ಈ ಸಂದರ್ಭದಲ್ಲಿ ಪ್ರವಾದಿ(ಸ) ಮತ್ತು ಅಬೂಬಕರ್(ರ) ಅಲ್ಲಿಂದ ಹೊರಟಿದ್ದರು. ಅಸ್ಮಾ ಆಹಾರವನ್ನು ತಂದರು. ಯಾತ್ರೆಗೆ ಹೊರಟಾಗ ಆ ಆಹಾರ ಮತ್ತು ನೀರಿನ ಚೀಲವನ್ನು ವಾಹನದಲ್ಲಿರಿಸಿ ಬಿಗಿದು ಕಟ್ಟಲು ಹಗ್ಗವಿರಲಿಲ್ಲ. ಆಗ ಅಸ್ಮಾ(ರ) ತಮ್ಮ ಸೊಂಟಕ್ಕೆ ಸುತ್ತಿದ ಬಟ್ಟೆಯ ಪಟ್ಟೆಯನ್ನು ಬಿಚ್ಚಿ ಎರಡಾಗಿ ಸೀಳಿದರು. ಅರ್ಧ ಭಾಗದಿಂದ ಆಹಾರ ಪದಾರ್ಥ ಮತ್ತು ನೀರಿನ ಚೀಲವನ್ನು ಒಂಟೆಯ ಮೇಲೆ ಕಟ್ಟಿದರು. ಉಳಿದರ್ಧವನ್ನು ತನ್ನ ಸೊಂಟಕ್ಕೆ ಬಿಗಿದು ಕೊಂಡರು. ಈ ಘಟನೆಯಿಂದ ಆ ಮಹಿಳಾರತ್ನಕ್ಕೆ 'ದಾತುನ್ನಿತಾಖೈನ್'(ಎರಡು ಪಟ್ಟೆಯವಳು) ಎಂಬ ಅನಶ್ವರ ಬಿರುದು ದೊರೆಯಿತು.

ತಂದೆ ಮತ್ತು ಪ್ರವಾದಿಯವರನ್ನು(ಸ) ಕಳುಹಿಸಿದ ಬಳಿಕ ಅವರು ಹಿಂತೆರಳಿದರು. ರಾತ್ರಿಯಲ್ಲಿ ನಡೆದ ಆ ಘಟನೆಯನ್ನು ಯಾರಿಗೂ ತಿಳಿಸದೇ ಮನದಲ್ಲಿಯೇ ಗುಪ್ತ ವಾಗಿರಿಸಿಕೊಂಡರು. ತನ್ಮೂಲಕ ಮಹಿಳೆಯರಿಗೆ ಗುಟ್ಟನ್ನು ಕಾಯ್ದುಕೊಳ್ಳಲಾಗುವುದಿಲ್ಲ ವೆಂಬ ನಾಣ್ಣುಡಿಯನ್ನು ಹುಸಿಗೊಳಿಸಿದರು.

ಗುಟ್ಟನ್ನು ಕಾಯ್ದುಕೊಳ್ಳುವ ಅವಕಾಶವು ಅವರಿಗೆ ಈ ಹಿಂದೆಯೂ ದೊರೆತಿತ್ತು. ತಂದೆ ಮತ್ತು ಪ್ರವಾದಿವರ್ಯರಿಗೆ(ಸ) ಆಹಾರ ತಯಾರಿಸುತ್ತಿದ್ದಾಗ ಇಸ್ಲಾಮ್ ಮತ್ತು ಮುಸ್ಲಿಮರ ಕಡು ವೈರಿಯಾಗಿದ್ದ ಅಬೂಜಹಲ್ ಮನೆಗೆ ಬಂದು ಅಬೂಬಕರ್‌ರ(ರ) ಬಗ್ಗೆ ವಿಚಾರಿಸಿದರು. ಆದರೆ, ಅಸ್ಮಾ(ರ) ಅವರು ಎಲ್ಲಿರುವರೆಂದು ತಿಳಿಸಲಿಲ್ಲ. ಅಬೂಜಹಲ್‌ನ ಬೆದರಿಕೆಗೂ ಅವರು ಮಣಿಯಲಿಲ್ಲ. ಕುಪಿತನಾದ ಅಬೂಜಹಲ್ ಗರ್ಭಿಣಿಯಾಗಿದ್ದ ಅಸ್ಮಾರಿಗೆ(ರ) ಬಲವಾಗಿ ಹೊಡೆದನು.

ಅಸ್ಮಾ(ರ) ಮಹಾ ಸೌಭಾಗ್ಯವತಿ. ಅವರು ಪುರುಷರ ಪೈಕಿ ಪ್ರಥಮವಾಗಿ ಇಸ್ಲಾಮ್ ಸ್ವೀಕರಿಸಿದ ಅಬೂಬಕರ್‌ರ(ರ) ಪುತ್ರಿ, ಪ್ರವಾದಿಯವರ(ಸ) ಪತ್ನಿ ಆಯಿಶಾರ(ರ) ಸಹೋದರಿ, ಪ್ರವಾದಿಯವರ(ಸ) ಸಹಚರ ಝುಬೈರ್ ಬಿನ್ ಅವ್ವಾಮ್‌ರ ಪತ್ನಿ, ವೀರ ಹುತಾತ್ಮ ಅಬ್ದುಲ್ಲಾ ಬಿನ್ ಝುಬೈರ್‌ರ ತಾಯಿ.

ಅಸ್ಮಾ(ರ) ಬಹಳ ಜಾಣ್ಮೆಯಾಗಿದ್ದರು. ಅವರು ಸ್ಥಿತ ಪ್ರಜ್ಞೆಯಿಂದ ವರ್ತಿಸುತ್ತಿದ್ದರು. ಅವರು ಪ್ರವಾದಿಯವರಿಂದ(ಸ) ಇಸ್ಲಾಮಿನ ಗುಣಶೀಲಗಳನ್ನು ಕಲಿತಿದ್ದರು. ಆದ್ದರಿಂದ ರಕ್ತ ಸಂಬಂಧ ಅವರಿಗೆ ತೊಡಕಾಗಲಿಲ್ಲ. ಧ್ಯೇಯ ನಿಷ್ಠೆಯು ಅದನ್ನು ಮೀರಿಸಿತ್ತು. ಸತ್ಯ ಧರ್ಮವನ್ನು ಸ್ವೀಕರಿಸದ ತಾಯಿಯೊಂದಿಗೂ ಪ್ರವಾದಿ ಯವರ(ಸ) ಸಲಹೆಯಂತೆ ವರ್ತಿಸುತ್ತಿದ್ದರು. ತಂದೆ ಮತ್ತು ಪ್ರವಾದಿಯವರು(ಸ) ಮದೀನಾ ತಲಪಿದ್ದರೂ ಅಸ್ಮಾ(ರ) ಅಲ್ಲಿಗೆ ಹೋಗಲಿಲ್ಲ. ತರುವಾಯ ಅಲ್ಲಿಗೆ ಹೋಗುವ ಅವಕಾಶ ದೊರೆತಾಗ ಅವರು ತುಂಬು ಗರ್ಭಿಣಿಯಾಗಿದ್ದರು. ಆದರೂ ಅವರು ಪಯಣವನ್ನು ಕೈಬಿಡಲಿಲ್ಲ. ಬಹಳ ಕಷ್ಟದಿಂದ ಪಯಣ ಹೊರಟರು. ಪ್ರವಾದಿಯವರ(ಸ) ಸನ್ನಿಧಿಗೆ ತಲುಪಬೇಕೆಂಬ ಆಕಾಂಕ್ಷೆಯೇ ಅದಕ್ಕೆ ಪ್ರೇರಕವಾಗಿತ್ತು. ಕುಬಾಕ್ಕೆ ತಲುಪಿದಾಗ ಅವರಿಗೆ ಹೆರಿಗೆಯಾಯಿತು. ಗಂಡು ಮಗು. ಮುಹಾಜಿರರಲ್ಲಿ ವಲಸೆಯ ಸ್ಥಳದಲ್ಲಿ ಪ್ರಥಮವಾಗಿ ಹುಟ್ಟಿದ ಆ ಮಗುವೇ, ಮುಂದೆ ಇಸ್ಲಾಮಿ ಇತಿಹಾಸದಲ್ಲಿ ಅನಶ್ವರರಾದ ಅಬ್ದುಲ್ಲಾ ಬಿನ್ ಝುಬೈರ್(ರ), ಹುತಾತ್ಮತೆಯ ವೀರ ಪದವಿ ಪಡೆದ ಮಹಾ ಕ್ರಾಂತಿಕಾರಿ.

ಅವರು ಸಂಪೂರ್ಣವಾಗಿ ಪತಿಯ ಇಂಗಿತದಂತೆ ವರ್ತಿಸುತ್ತಿದ್ದರು. ಅವರಿಗೆ ಅಹಿತಕರವಾದ ಅಥವಾ ಅವರನ್ನು ಕುಪಿತಗೊಳಿಸುವ ಮಾತುಗಳನ್ನು ಹೇಳುತ್ತಿರಲಿಲ್ಲ. ಅವರ ಜೀವನವು ದಾರಿದ್ರ್ಯ ಮತ್ತು ಸಂಕಷ್ಟದಿಂದ ಕೂಡಿತ್ತು. ಅವರ ಪತಿ ಝುಬೈರ್ ಬಿನ್ ಅವ್ವಾಮ್ ತೀರಾ ಬಡವರಾಗಿದ್ದರು. ಒಂದು ಕುದುರೆ ಮಾತ್ರವೇ ಅವರ ಸಂಪತ್ತಾಗಿತ್ತು. ಅದನ್ನು ನೋಡಿಕೊಳ್ಳಲು ಆಳುಕಾಳುಗಳಿರಲಿಲ್ಲ. ಗಣ್ಯ ವ್ಯಾಪಾರಿ ಯಾಗಿದ್ದ ಅಬೂಬಕರ್‌ರ(ರ) ಪುತ್ರಿಯಾಗಿದ್ದೂ ಅಸ್ಮಾರವರು(ರ) ಯಾವುದೇ ಬೇಸರವಿಲ್ಲದೆ ಅದರ ಚಾಕರಿ ಮಾಡುತ್ತಿದ್ದರು. ಅದಕ್ಕೆ ಹುಲ್ಲು ಕಿತ್ತು ತರುತ್ತಿದ್ದರು. ಖರ್ಜೂರದ ಬೀಜ ಹುಡಿ ಮಾಡಿ ತಿನ್ನಿಸುತ್ತಿದ್ದರು. ಆ ಬಗ್ಗೆ ಯಾರನ್ನೂ ದೂರುತ್ತಿರಲಿಲ್ಲ. ಕಾಲವನ್ನು ಹಳಿಯುತ್ತಿರಲಿಲ್ಲ.

ಒಮ್ಮೆ ಅಸ್ಮಾ(ರ) ಖರ್ಜೂರದ ಬೀಜವನ್ನು ತಲೆಯಲ್ಲಿ ಹೊತ್ತು ತರುತ್ತಿದ್ದರು. ಒಂಟೆಯಲ್ಲಿ ಸಂಚರಿಸುತ್ತಿದ್ದ ಪ್ರವಾದಿಯವರು(ಸ) ಅದನ್ನು ನೋಡಿದರು. ಹತ್ತಿರ ತಲಪಿದಾಗ ಒಂಟೆಯನ್ನು ನಿಲ್ಲಿಸಿ ಅದರ ಮೇಲೆರುವಂತೆ ತಿಳಿಸಿದರು. ಆದರೆ ಸಹೋದರಿಯ ಪತಿಯ ಜತೆ ಸಂಚರಿಸಲು ಅವರಿಗೆ ನಾಚಿಕೆಯಾಯಿತು. ತಮ್ಮ ಪತಿಗೆ ಅದು ಒಪ್ಪಿಗೆಯಾಗ ದೆಂದು ಅವರು ಭಾವಿಸಿದರು. ಆದ್ದರಿಂದ ಅವರು ಕಾಲ್ನಡಿಗೆ ಯಲ್ಲೇ ಮನೆಗೆ ಹೋದರು. ಮನೆಗೆ ತಲುಪಿದ ಬಳಿಕ ಪತಿಗೆ ಈ ವಿಷಯ ತಿಳಿಸಿದರು. ಆಗ ಪತಿಯು ಹೀಗೆಂದರು:

"ನೀನು ಪ್ರವಾದಿಯ ಜತೆ ಒಂಟೆಯಲ್ಲಿ ಸಂಚರಿಸುವುದಕ್ಕಿಂತ, ನೀನು ಖರ್ಜೂರದ ಬೀಜವನ್ನು ತಲೆಯಲ್ಲಿ ಹೊತ್ತು ತರುವುದೇ ನನಗೆ ಅರೋಚಕವಾಗಿದೆ."

ಅಸ್ಮಾ(ರ) ತಮ್ಮ ಆದರ್ಶ ನಿಷ್ಠೆಯಿಂದ ಇತಿಹಾಸದಲ್ಲಿ ಅಮರವಾಗಿದ್ದಾರೆ. ವೃದ್ಧಾಪ್ಯದಲ್ಲಿ ಬಳಲುತ್ತಿದ್ದಾಗ ಅವರು ತಮ್ಮ ಪುತ್ರ ಅಬ್ದುಲ್ಲಾ ಬಿನ್ ಝುಬೈರ್ ರನ್ನು(ರ) ಯುದ್ಧರಂಗಕ್ಕೆ ಕಳುಹಿಸುತ್ತಾರೆ. ಆ ವೀರ ಮಾತೆಯ ಸ್ಫೂರ್ತಿದಾಯಕ ಮಾತುಗಳನ್ನು ಆಲಿಸಿದ ಪುತ್ರ ಹೀಗೆಂದರು:

"ಇಂತಹ ಮಾತುಗಳನ್ನು ನಿಮ್ಮಿಂದ ಆಲಿಸಲಿಕ್ಕಾಗಿಯೇ ನಾನು ಈಗ ಇಲ್ಲಿಗೆ ಬಂದಿದ್ದೇನೆ. ನಾನು ಹೇಡಿಯೋ ದುರ್ಬಲನೋ ಎಂಬುದು ಅಲ್ಲಾಹನಿಗೆ ತಿಳಿದಿದೆ. ನಾನು ಐಹಿಕ ಸುಖಾಡಂಬರದ ಮೋಹದಿಂದ ಈ ರಂಗಕ್ಕೆ ಧುಮುಕ್ಕಿಲ್ಲ. ಅಲ್ಲಾಹನ ಕಾನೂನುಗಳನ್ನು ಧಿಕ್ಕರಿಸುವುದು ನನಗೆ ಅಸಹ್ಯವಾಗಿದೆ. ಅದಕ್ಕೆ ಅಲ್ಲಾಹನೇ ಸಾಕ್ಷಿ. ನಾನಿದೋ ನೀವು ಬಯಸುವ ಕಾರ್ಯಕ್ಕೆ ಹೊರಟಿದ್ದೇನೆ. ನಾನು ವಧಿಸಲ್ಪಟ್ಟರೆ ಅದಕ್ಕಾಗಿ ಚಿಂತಿಸಬೇಡಿರಿ. ನಿಮ್ಮ ಮೇಲ್ವಿಚಾರಣೆಯನ್ನು ನಾನು ಅಲ್ಲಾಹನಿಗೆ ಒಪ್ಪಿಸುತ್ತೇನೆ."

"ನೀನು ಅಸತ್ಯಕ್ಕಾಗಿ ವಧಿಸಲ್ಪಟ್ಟರೆ ಮಾತ್ರ ನನಗೆ ದುಃಖವಾದೀತು" ಅಸ್ಮಾ(ರ) ಹೇಳಿದರು.

ತರುವಾಯ ಮಗನನ್ನೇ ಮುದ್ದಿಸಿ ರಣರಂಗಕ್ಕೆ ಕಳುಹಿಸಿದರು. ಪ್ರಿಯ ಪುತ್ರನು ಬೀಳ್ಕೊಂಡಾಗ ಎರಡೂ ಕೈಗಳನ್ನೆತ್ತಿ ಅವರು ಪ್ರಾರ್ಥಿಸಿದರು,

"ಪ್ರಭೂ, ಜಗತ್ತು ನಿದ್ರಿಸುತ್ತಿರುವಾಗ ನಡುರಾತ್ರಿಯಲ್ಲಿ ಎದ್ದು ನಿಂತು ನಿನ್ನೊಡನೆ ಪ್ರಾರ್ಥಿಸುವ ಅಬ್ದುಲ್ಲಾನ ಮೇಲೆ ಕರುಣೆ ತೋರಿಸು. ಮಕ್ಕಾ ಮತ್ತು ಮದೀನಾಗಳ ಸುಡುಬಿಸಿಲನ್ನು ಸಹಿಸಿ ವ್ರತ ಆಚರಿಸುವ ನನ್ನ ಮಗನಿಗೆ ನೀನು ಕರುಣೆ ತೋರಿಸು. ತಂದೆ ತಾಯಿಗಳ ಕರ್ತವ್ಯಗಳನ್ನು ಪೂರೈಸಿರುವ ಆತನಿಗೆ ನೀನು ಅನುಗ್ರಹ ನೀಡು. ಅಲ್ಲಾಹನೇ! ನಾನಿದೋ ಆತನನ್ನು ನಿನಗೆ ಅರ್ಪಿಸಿದ್ದೇನೆ. ನೀನು ಏನೇ ವಿಧಿಸಿದರೂ ನಾನು ಸಂತೃಪ್ತಳಾಗಿರುತ್ತೇನೆ. ಆತನ ಬಗ್ಗೆ ಕ್ಷಮಾಳುಗಳಿಗಿರುವ ಪ್ರತಿಫಲವನ್ನು ನೀನು ನನಗೆ ದಯಪಾಲಿಸು."

ಅವರು ತಾಳ್ಮೆ ವಹಿಸಿ ಮಹಾ ಅನುಗ್ರಹಕ್ಕೆ ಪಾತ್ರರಾಗಬೇಕೆಂಬುದೇ ದೇವ ವಿಧಿಯಾಗಿತ್ತು. ಆ ದಿನ ಅಸ್ತಮಿಸುವುದಕ್ಕಿಂತ ಮೊದಲೇ ಪ್ರಿಯ ಪುತ್ರ ಅಬ್ದುಲ್ಲಾ ವೈರಿಗಳಿಂದ ಹತರಾದರು. ಆ ಬಳಿಕ ಎರಡು ವಾರಗಳಲ್ಲಿಯೇ ಆ ವೀರ ಮಹಿಳೆಯೂ ಪರಲೋಕ ಸೇರಿದರು.

---

# ಪ್ರಥಮ ಹುತಾತ್ಮೆಳು

"ನಮ್ಮ ವಿಶ್ವಾಸ ಕರ್ಮಗಳಲ್ಲಿ ನೀವು ಹಸ್ತಕ್ಷೇಪ ಮಾಡಬಾರದು. ಅದನ್ನು ನಾವೇ ನಿರ್ಧರಿಸುತ್ತೇವೆ. ನಿಮ್ಮ ಕೆಲಸವನ್ನು ನಾವು ಎಂದಿನಂತೆಯೇ ಮಾಡುತ್ತಿದ್ದೇವೆ. ಅದರಲ್ಲಿ ಏನಾದರೂ ಲೋಪ ಮಾಡುತ್ತಿದ್ದೇವೆಯೇ ಎಂದು ನೀವು ಗಮನಿಸಿದರೆ ಸಾಕು" ಸುಮಯ್ಯ ದೃಢ ಸ್ವರದಿಂದ ಸಾರಿದರು.

ಈ ಅನಿರೀಕ್ಷಿತ ಉತ್ತರದಿಂದ ಅಬೂಹುದೈಫ ದಂಗಾದರು. ಓರ್ವ ಗುಲಾಮ ಹೆಣ್ಣು, ಯಜಮಾನನ ಮುಂದೆ ಇಷ್ಟೊಂದು ದಿಟ್ಟತನದಿಂದ ಮಾತಾಡುವುದನ್ನು ಊಹಿಸಲೂ ಸಾಧ್ಯವಿರಲಿಲ್ಲ.

ಸುಮಯ್ಯ ದಾಸಿಯಾಗಿ ಜನಿಸಿದ್ದರು. ಜಾನುವಾರುಗಳಂತೆ ಮಾರಾಟದ ವಸ್ತುವಾಗಿದ್ದರೂ ದಿನ ರಾತ್ರಿ ದುಡಿಯುವುದೇ ಗುಲಾಮ ಹೆಣ್ಣಿನ ವಿಧಿಯಾಗಿತ್ತು. ಯಜಮಾನನ ಮಾತಿನಂತೆ ನಡೆಯಬೇಕು. ಆತ ಯಾರಿಗೋ ಹಣ ಕೊಟ್ಟು ಆಕೆಯನ್ನು ಖರೀದಿಸಿದ್ದನು!

ಸುಮಯ್ಯ ಅರೇಬಿಯಾದ ಗುಲಾಮ ಹೆಣ್ಣುಗಳಲ್ಲಿ ಒಬ್ಬರಾಗಿದ್ದರು. ಸಾಮಾನ್ಯ ವಾಗಿ ಗುಲಾಮ ಹೆಣ್ಣಿನ ಬದುಕು ಶೋಚನೀಯವಾಗಿರುತ್ತಿತ್ತು. ಯಜಮಾನನ ಹೊಡೆತ, ಬಡಿತ ಮತ್ತು ಅಶ್ಲೀಲ ಬೈಗುಳಗಳನ್ನೇ ತಿನ್ನಬೇಕು. ಮನೆಯೊಡತಿಯ ಕಸಬರಿಕೆಗೆ ಬೆನ್ನು ತೋರಿಸಬೇಕು! ಆದರೆ ಇತರ ಹೆಣ್ಣುಗಳಿಗಿಂತ ಸುಮಯ್ಯ ಅದೃಷ್ಟಶಾಲಿ ಯಾಗಿದ್ದರು. ಅವರ ಯಜಮಾನ ಅಬೂಹುದೈಫ ಬಿನ್ ಮುಗೀರ ಅಷ್ಟೊಂದು ಒರಟು ಸ್ವಭಾವದವರಾಗಿರಲಿಲ್ಲ. ಪ್ರಾಯಶಃ ಸುಮಯ್ಯಾರ ಗುಣನಡತೆ ಮತ್ತು ಸೇವಾ ಮನೋಭಾವವೇ ಅದಕ್ಕೆ ಕಾರಣವಾಗಿರಬೇಕು. ಮಕ್‌ಝೂಮ್ ಗೋತ್ರದ ಆ ಯಜಮಾನನು ಸೇವಕಿಯೊಂದಿಗೆ ಮರ್ಯಾದೆಯಿಂದ ವರ್ತಿಸುತ್ತಿದ್ದರು. ಓರ್ವ ಯೋಗ್ಯ ವರನೊಂದಿಗೆ ಅವರ ವಿವಾಹ ಮಾಡಿಸಿದರು. ಯಮನ್‌ನ ಯಾಸರುಲ್ ಅಬಸಿ ಅವರ ಪತಿಯಾಗಿದ್ದರು. ಅವರಿಗೊಂದು ಮಗು ಜನಿಸಿತ್ತು- ಅಮ್ಮಾರ್. ಈ ಮೂವರೂ ಅಬೂ ಹುದೈಫರ ಮನೆಯಲ್ಲಿ ಚಿಂತೆಯಿಲ್ಲದೆ ಬಾಳುತ್ತಿದ್ದರು.

ಅದೊಂದು ದಿನ ಯಜಮಾನರು ಕೋಪದಿಂದ ಕಿಡಿಕಾರುತ್ತಾ ಮನೆಗೆ ಬಂದರು. ಅಂತಹ ಸಂದರ್ಭಗಳಲ್ಲಿ 'ಸುಮಯ್ಯ, ಪತಿ ಮತ್ತು ಪುತ್ರ ಅವರ ಬಳಿ ನಿಲ್ಲುತ್ತಿರಲಿಲ್ಲ. ಅವರು ಒಳಬಂದ ಕೂಡಲೇ ಪತ್ನಿಯನ್ನು ಕರೆದು ಹೇಳಿದರು: "ನಾನು ಹೇಳಿದ ಆ ಮುಹಮ್ಮದ್ ಬಿನ್ ಅಬ್ದುಲ್ಲಾ ಇದ್ದಾನಲ್ಲಾ ಆತನನ್ನು ಅಲ್ಲಾಹನು ನಮ್ಮ ಪ್ರವಾದಿಯಾಗಿ ನೇಮಿಸಿದ್ದಾನಂತೆ. ಆತನು ನಮ್ಮ ಮೂರ್ತಿಗಳನ್ನು ದೂರುತ್ತಿ ದ್ದಾನೆ. ಅವು ಬರೇ ಕಲ್ಲುಗಳಂತೆ! ಯಾವುದೇ ಉಪಕಾರ ಅಥವಾ ಉಪದ್ರವ ಮಾಡಲಾಗದವುಗಳಂತೆ."

"ಅದಕ್ಕೆ ಯಾಕಿಷ್ಟು ತಲೆ ಕೆಡಿಸುವುದು! ಆತನಿಗೇನೋ ಸೋಂಕು ಆಗಿರಬೇಕು ಅಥವಾ ಮೂರ್ತಿ ಶಾಪ ತಟ್ಟಿರಬೇಕು. ಕೆಲದಿನ ಕಳೆದರೆ ಅದು ಶಮನವಾದೀತು. ಅದೇನೂ ದೊಡ್ಡ ಸಂಗತಿಯಲ್ಲ" ಪತ್ನಿ ಹೇಳಿದರು.

"ಈ ವಿಷಯ ನೀನು ಹೇಳಿದಷ್ಟು ಹಗುರದ್ದಲ್ಲ, ಆತನಿಗೆ ಯಾವ ಸೋಂಕೂ ಇಲ್ಲ. ಆತ ಅಹಂಕಾರಿ, ಧಿಕ್ಕಾರಿ, ದ್ರೋಹಿ! ಮಾನವರೆಲ್ಲರೂ ಸಮಾನರಂತೆ! ಯಜಮಾನ ಮತ್ತು ಗುಲಾಮರ ಮಧ್ಯೆ ಯಾವುದೇ ವ್ಯತ್ಯಾಸವಿಲ್ಲ! ಕರಿ ಗುಲಾಮ ಸೇವಕರು ಮತ್ತು ನಾವೆಲ್ಲರೂ ಸಮಾನರಂತೆ! ಇದೆಂತಹ ಅವಸ್ಥೆ. ನಾವು ಮತ್ತು ಸುಮಯ್ಯ-ಅಮ್ಮಾರ್ ಎಲ್ಲರೂ ಸಮಾನರೇ? ಆದ್ದರಿಂದ ಆತನ ಹೊಸ ಧರ್ಮವು ನಮಗೆ ವಿರುದ್ಧವಾಗಿದೆ. ನಮ್ಮ ಅಧಿಕಾರ ಮತ್ತು ಸ್ಥಾನಮಾನಕ್ಕೆ ವಿರುದ್ಧವಾಗಿದೆ. ಇನ್ನು ಅದನ್ನು ಸಹಿಸಲು ಸಾಧ್ಯವಿಲ್ಲ" ಅಬೂ ಹುದೈಫಾ ತಾಳ್ಮೆಗೆಟ್ಟಿದ್ದರು.

ಈ ಮಾತು ಯಾಸಿರ್, ಸುಮಯ್ಯ ಮತ್ತು ಅಮ್ಮಾರ್‌ರ ಮನ ತಟ್ಟಿತು. ಅವರೆಲ್ಲರೂ ಈ ಮೊದಲೇ ಪ್ರವಾದಿ(ಸ) ಮತ್ತು ಅವರ ಸಂದೇಶದ ಬಗ್ಗೆ ಕೇಳಿದ್ದರು. ಆದ್ದರಿಂದ ಅವರು ಒಟ್ಟಿಗೆ ಕುಳಿತು ಸತ್ಯಸಂಧರಾದ ಮುಹಮ್ಮದ್(ಸ) ಮತ್ತು ಅವರ ಹೊಸ ಧರ್ಮದ ಕುರಿತು ಚರ್ಚಿಸಿದರು. ಶೀಘ್ರವೇ ಒಂದು ನಿರ್ಧಾರಕ್ಕೆ ಬಂದರು. ಮುಹಮ್ಮದ್‌ರ(ಸ) ಮಾತುಗಳು ನಿಜ. ಮೂರ್ತಿಗಳು ಕೇವಲ ಕಲ್ಲು ಗಳಾಗಿವೆ. ಅವುಗಳನ್ನು ಮುಖಂಡರು ಮತ್ತು ಶ್ರೀಮಂತರು ತಮ್ಮ ಹಿತರಕ್ಷಣೆಗಾಗಿ ಮಾಡಿಕೊಂಡಿದ್ದಾರೆ. ಅದು ಅವರಿಗೆ ಶೋಷಣೆಯ ಮಾರ್ಗವಾಗಿದೆ. ಅವುಗಳ ಸಮಕ್ಷಮದಲ್ಲಿಯೇ ಗಣ್ಯರು ಬಡ ಹೆಣ್ಣುಗಳನ್ನು ಲೈಂಗಿಕವಾಗಿ ಬಳಸುತ್ತಿದ್ದಾರೆ. ಅವು ಕೇವಲ ಯಜಮಾನರ ಹಿತ ಸಂರಕ್ಷಿಸುವ ದೇವರಾಗಿದೆ. ಮುಂದಾಳುಗಳ ಕ್ರೌರ್ಯವನ್ನು ರಕ್ಷಿಸುವ ಕೃತಕ ದೇವರುಗಳು! ಅದು ನಮ್ಮಂತಹ ದಾಸರನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಆದ್ದರಿಂದ ಮುಹಮ್ಮದ್‌ರ(ಸ) ಮಾತುಗಳು ಸತ್ಯ. ಅಲ್ಲದೇ ಅವರು ಈ ತನಕ ಸುಳ್ಳು ಹೇಳಿದವರಲ್ಲ. ಆದ್ದರಿಂದಲೇ ಪ್ರಾಮಾಣಿಕ(ಅಲ್ ಅಮೀನ್) ಎಂಬ ಬಿರುದು ಗಳಿಸಿದ್ದಾರೆ. ಅಲ್ಲಾಹನು ಸೃಷ್ಟಿಸಿದ್ದರೆ ಆತನನ್ನೇ ಆರಾಧಿಸಬೇಕಲ್ಲವೇ? ಕ್ರೌರ್ಯವನ್ನು ಬೆಂಬಲಿಸುವ ಈ ಕಪಟ ದೇವರನ್ನು ಆರಾಧಿಸುವುದೇಕೆ?

ಗಹನವಾಗಿ ಆಲೋಚಿಸಿದ ಬಳಿಕ ಮೂವರೂ ಪ್ರವಾದಿಯವರ(ಸ) ಬಳಿ ಹೋದರು. ತಮ್ಮ ನಿರ್ಧಾರವನ್ನು ಅವರಿಗೆ ತಿಳಿಸಿ ಇಸ್ಲಾಮ್ ಸ್ವೀಕರಿಸಿದರು. ಪ್ರವಾದಿ(ಸ) ಅವರಿಗೆ ಅದರ ಭಾವೀ ಪರಿಣಾಮದ ಕುರಿತು ತಿಳಿಸಿದರು. ಆ ಬಗ್ಗೆ ಅವರಿಗೆ ಮೊದಲೇ ತಿಳಿದಿತ್ತು. ಏಕೆಂದರೆ ಅವರು ಗುಲಾಮರು. ಯಜಮಾನನ ಧರ್ಮವೇ ಗುಲಾಮನ ಧರ್ಮ. ಅವರಿಗೆ ಸ್ವಯಂ ನಿರ್ಧರಿಸುವ ಹಕ್ಕಿಲ್ಲ. ವಿಚಾರ ಸ್ವಾತಂತ್ರ್ಯವಿಲ್ಲ. ಎಲ್ಲವೂ ಯಜಮಾನನ ನಿರ್ಧಾರಕ್ಕೆ ತಕ್ಕಂತಿರಬೇಕು. ಅವರು ನಿರೀಕ್ಷಿಸಿದ್ದಂತೆಯೇ ಆಯಿತು. ಅಬೂಹುದೈಫ ಅವರಿಗೆ ತೀವ್ರ ಬೆದರಿಕೆ ಹಾಕಿದನು. ಪೂರ್ವ ಧರ್ಮಕ್ಕೆ ಮರಳುವಂತೆ ಒತ್ತಾಯಿಸಿದನು. ಅನ್ಯಥಾ ಕೊಲ್ಲುವುದಾಗಿ ಬೆದರಿಕೆ ಹಾಕಿದನು. ಆದರೆ ಮೂವರೂ ಅಂಜಲಿಲ್ಲ. ಸತ್ಯದಲ್ಲಿ ಅಚಲರಾಗಿ ನಿಂತರು.

ಅಂದು ಪ್ರಥಮವಾಗಿ ಸುಮಯ್ಯರು ಯಜಮಾನನ ಮುಂದೆ ಅಷ್ಟೊಂದು ದಿಟ್ಟವಾಗಿ ಉತ್ತರಿಸಿದ್ದರು. ಕೋಪೋದ್ರಿಕ್ತರಾಗಿ ಅಬೂಹುದೈಫ ಅಬ್ಬರಿಸಿದರು: "ಮರ್ಯಾದೆಯಿಂದ ಮರಳುವುದು ಉತ್ತಮ. ಮೂರು ದಿನದ ವಾಯಿದೆ ಕೊಡುತ್ತೇನೆ. ನಾಲ್ಕನೆಯ ದಿನ ನೀವು ಹೊಸ ಧರ್ಮದಲ್ಲಿ ಜೀವಂತ ಉಳಿಯಲಾರಿರಿ."

ನಾಲ್ಕನೆಯ ದಿನ ಅಬೂ ಹುದೈಫ ಬಂದರು. ಅವರ ಕೋಪವೆಲ್ಲವು ಸುಮಯ್ಯಾರ ಮೇಲಿತ್ತು. ಒಬ್ಬ ಗುಲಾಮ ಹೆಣ್ಣು ನನ್ನೊಡನೆ ಅಷ್ಟು ಧೈರ್ಯದಿಂದ ಮಾತನಾಡುವುದೇ? ಆಕೆ ಬಹಳ ವಿಧೇಯತೆ ಮತ್ತು ಮರ್ಯಾದೆಯಿಂದ ವರ್ತಿಸುತ್ತಿದ್ದಳು. ಮುಹಮ್ಮದ್ ಆಕೆಯ ತಲೆಕೆಡಿಸಿ ಬಿಟ್ಟಿದ್ದಾನೆ. ಬಂಡಾಯ ಕಲಿಸಿ ಕೊಟ್ಟಿದ್ದಾನೆ. ಸುಮಯ್ಯರತ್ತ ತಿರುಗಿ ಹುದೈಫ ಗಂಭೀರವಾಗಿ ಪ್ರಶ್ನಿಸಿದರು:

"ಹೂಂ ಏನೆಂದು ತೀರ್ಮಾನಿಸಿದಿರಿ?"

"ಏನಿದೆ ತೀರ್ಮಾನಿಸಲಿಕ್ಕೆ! ನಾವು ಅಲ್ಲಾಹನನ್ನು ನಂಬಿದ್ದೇವೆ. ನೀವು ಏನು ಮಾಡಿದರೂ ನಾವು ಬೇರೇನನ್ನೂ ಆರಾಧಿಸುವುದಿಲ್ಲ" ಸುಮಯ್ಯ ದೃಢ ಸ್ವರದಲ್ಲಿ ಹೇಳಿದರು. ವಿಶ್ವಾಸವು ಅವರಿಗೆ ಸ್ಫೂರ್ತಿ ನೀಡಿತು. ಅವರಿಂದ ಕೋಪಾಂಧನಾದ ಹುದೈಫರ ಚಾಟಿಯು ಸುಮಯ್ಯರ ಮೇಲೆರಗಿತು. ಅವರ ಬೆನ್ನು, ಭುಜ, ಕೈಕಾಲುಗಳಿಂದ ರಕ್ತ ಸುರಿಯಿತು. ಆದರೆ ಅದರಿಂದ ಆ ವೀರ ಮಹಿಳೆಯ ಸ್ಫೂರ್ತಿ ಕುಂದಲಿಲ್ಲ. ಅವರು ನಿರ್ಲಿಪ್ತರಾಗಿ ಅಬೂ ಹುದೈಫರ ಮುಂದೆ ನಿಂತರು. ವಿಶ್ವಾಸ ಬಲದಿಂದ ನೋವನ್ನು ಸಹಿಸಿದರು. ಅವರು ಅತ್ಯುನ್ನತ ಹಾಗೂ ಅಪರೂಪದ ಮನೋಬಲವನ್ನು ಪಡೆದಿದ್ದರು. ಅಬೂ ಹುದೈಫಾ ಕೈ ಸೋಲುವ ತನಕ ಹೊಡೆದರು. ನಾಳೆ ಬೆಳಗಾಗುವುದಕ್ಕಿಂತ ಮುಂಚೆ ಹೊಸ ಧರ್ಮವನ್ನು ತೊರೆಯದಿದ್ದರೆ ಏನಾಗುವುದೋ ನೋಡಿ ಎಂದು ಗದರಿಸಿ ಅಬೂಹುದೈಫಾ ಹೊರಟು ಹೋದರು.

ಮುಂದಿನ ನಡುಮಧ್ಯಾಹ್ನ ಅವರು ಅಲ್ಲಿಗೆ ಬಂದರು. ಜತೆಗೆ ಇಬ್ಬರು ಧಾಂಡಿಗರಿದ್ದರು. ಮೂವರೂ ಮನಸ್ಸು ಬದಲಾಯಿಸಿಲ್ಲವೆಂದು ತಿಳಿದು ಅವರ

ಕೈಗಳನ್ನು ಹಿಂದಕ್ಕೆ ಕಟ್ಟಿ ಕಾಲುಗಳನ್ನು ಬಿಗಿಯುವಂತೆ ಆಜ್ಞಾಪಿಸಿದ್ದರು. ತರುವಾಯ ಸುಡು ಮರಳಿನಲ್ಲಿ ಮಲಗಿಸುವಂತೆ ತಿಳಿಸಿದರು. ಜತೆಗಾರರು ಕ್ಷಣ ಮಾತ್ರದಲ್ಲಿ ಆ ಕೆಲಸ ಮಾಡಿ ಮುಗಿಸಿದರು. ಸುಡುತ್ತಿರುವ ಮರಳನ್ನು ಅವರ ಮೇಲೆ ಸುರಿದರು. ಮೂವರು ದಡಕ್ಕೆ ಬಿದ್ದ ಮೀನಿನಂತೆ ಚಡಪಡಿಸಿದರು. ಅಬೂ ಹುದೈಫ ಅವರ ಅವಸ್ಥೆಯನ್ನು ನೋಡಿ ಕೇಕೆ ಹಾಕಿದರು. ಸಂಗಡಿಗರನ್ನು ಕರೆಯಿಸಿ ತನ್ನ ಸಾಹಸ ಕೃತ್ಯವನ್ನು ತೋರಿಸಿದರು. ಆ ಕಠೋರ ಹೃದಯಿಗಳೆಲ್ಲರೂ ಆ ದಾರುಣ ದೃಶ್ಯದಿಂದ ಹರ್ಷಿತರಾದರು. ಬಿಸಿಲಿನ ದಗೆಯಿಂದಾಗಿ ಅವರಿಗೆ ಅಲ್ಲಿ ಹೆಚ್ಚು ನಿಲ್ಲಲಾಗಲಿಲ್ಲ. ಅವರು ಕೂಡಲೇ ಅಲ್ಲಿಂದ ಹೋದರು.

ಸಂಜೆ ಅಬೂಹುದೈಫ ಬಂದರು. ಕೈಕಾಲುಗಳ ಗಂಟನ್ನು ಬಿಚ್ಚಿದ ಬಳಿಕ ಕೇಳಿದರು: "ಮರಳುತ್ತೀರಾ?"

"ಯಾವುದರಿಂದ ಮರಳಬೇಕು? ಸತ್ಯದಿಂದ ಅಸತ್ಯಕ್ಕೇನು? ಬೆಳಕಿನಿಂದ ಕತ್ತಲಿಗೇನು? ಸಾಧ್ಯವಿಲ್ಲ. ಚಿತ್ರಹಿಂಸೆಯಿಂದ ನನ್ನನ್ನು ಕೊಚ್ಚಿ ಹಾಕಿದರೂ ಅದು ನಡೆಯದು" ಅವರು ಒಕ್ಕೊರಳಿನಿಂದ ಸಾರಿದರು.

"ಹಾಗಿದ್ದರೆ ಉಳಿದದ್ದು ನಾಳೆ ನೋಡೋಣ" ಎನ್ನುತ್ತಾ ಅಬೂ ಹುದೈಫ ಹೊರಟು ಹೋದರು. ಮೂವರ ದೇಹವೂ ಗಾಯದಿಂದ ಜರ್ಝರಿತವಾಗಿತ್ತು. ಆದರೂ ಅವರ ಅಂತರಂಗವು ಇನ್ನೂ ಆನಂದ ಭರಿತವಾಗಿತ್ತು. ವೃದ್ಧರಾಗಿದ್ದ ಯಾಸಿರ್ ಮತ್ತು ಸುಮಯ್ಯರ ದೇಹವು ಮರ್ದನದಿಂದ ಬಳಲಿದ್ದರೂ ಅವರ ಮನಸ್ಸು ದುರ್ಬಲವಾಗಿರಲಿಲ್ಲ. ದೌರ್ಜನ್ಯ ಹಲವು ದಿನ ಮುಂದುವರಿಯಿತು. ಆದರೆ ಆ ಕುಟುಂಬದ ವಿಶ್ವಾಸದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಪ್ರವಾದಿ ಯವರಿಗೆ(ಸ) ಇದೆಲ್ಲ ತಿಳಿದಿತ್ತು. ಕೆಲವು ಬಾರಿ ಅದನ್ನು ಕಣ್ಣಾರೆ ನೋಡಿದ್ದರು. ಪ್ರವಾದಿ(ಸ) ಅವರಿಗೆ ಸಾಂತ್ವನ ನೀಡುತ್ತಿದ್ದರು.

"ಯಾಸಿರ್ ಕುಟುಂಬವೇ! ತಾಳ್ಮೆ ವಹಿಸಿರಿ. ನಿಮಗೆ ಸ್ವರ್ಗವೇ ಪ್ರತಿಫಲ."

ಅಬೂ ಹುದೈಫ ಸಂಪೂರ್ಣ ವಿಷಣ್ಣರಾದರು. ತಿಳಿದಿರುವ ಎಲ್ಲ ಶಿಕ್ಷೆಯನ್ನು ನೀಡಿಯೂ ಪ್ರಯೋಜನವಾಗಲಿಲ್ಲ. ಆದ್ದರಿಂದ ಒಂದು ದಿನ ಅಬೂಜಹಲ್‌ನನ್ನು ಕರೆ ತಂದರು. ಆತನ ಹಸ್ತದಲ್ಲಿ ಒಂದು ಹರಿತವಾದ ಈಟಿ ಇತ್ತು. ಅಬೂ ಹುದೈಫ ಹೇಳಿದರು: "ನಿಮಗೆ ಮನಸ್ಸು ಬಂದಂತೆ ಮಾಡಿರಿ. ನನಗೆ ಇವರಿಂದ ಸಾಕಾಗಿ ಬಿಟ್ಟಿದೆ."

ಅಬೂಜಹಲ್ ಅವರು ಇಸ್ಲಾಮಿನಿಂದ ಮರಳುವಂತೆ ಬಹಳಷ್ಟು ಪ್ರಯತ್ನಿಸಿದನು. ಆದರೆ ಸುಮಯ್ಯ ಜಗ್ಗಲಿಲ್ಲ. ಕೊನೆಗೆ ಕೋಪ ತಡೆಯಲಾಗದೆ ಅಬೂಜಹಲ್ ಈಟಿಯನ್ನು ಮೇಲೆತ್ತಿ 'ಮರಳದಿದ್ದರೆ ಕೊಂದು ಬಿಡುತ್ತೇನೆ' ಎಂದು ರಾಕ್ಷಸೀಯವಾಗಿ

ಘರ್ಜಿಸಿದರು. ಸುಮಯ್ಯರ ದೃಷ್ಟಿಯು ಲೌಕಿಕ ಪ್ರಪಂಚವನ್ನು ಮೀರಿ ಸ್ವರ್ಗದಲ್ಲಿ ನಾಟಿತ್ತು. ಪ್ರವಾದಿವರ್ಯರ(ಸ) ವಾಗ್ದಾನವೇ ಅವರ ಮನದಲ್ಲಿ ತುಂಬಿತ್ತು. ಅವರು ದೃಢ ಸ್ವರದಿಂದ ಹೀಗೆಂದರು:

"ನಿನ್ನ ಈಟಿಯಿಂದ ನನ್ನ ವಿಶ್ವಾಸವು ಕದಲಲಾರದು. ನಾನು ಸರ್ವಶಕ್ತನಾದ ಅಲ್ಲಾಹನ ಅಭಯ ಯಾಚಿಸಿದ್ದೇನೆ. ಆತನಿಂದಲೇ ರಕ್ಷಣೆಯನ್ನು ಬೇಡುತ್ತೇನೆ. ಆತನ ಹೊರತು ನನ್ನನ್ನು ರಕ್ಷಿಸಲು ನಿನ್ನಿಂದ ಸಾಧ್ಯವಿಲ್ಲ."

ಅಬೂ ಹುದೈಫ ಮತ್ತು ಅಬೂಜಹಲ್, ಸುಮಯ್ಯರನ್ನು ಉದ್ದೇಶಪೂರ್ವಕವಾಗಿ ಗುರಿಯಾಗಿಸಿದ್ದರು. ಅವರನ್ನು ಕೊಲ್ಲುವುದನ್ನು ನೋಡಿದರೆ ಪತಿ ಯಾಸಿರ್(ರ) ಮತ್ತು ಪುತ್ರ ಅಮ್ಮಾರ್(ರ) ಹಿಂಜರಿಯಬಹುದೆಂದು ಅವರು ನಿರೀಕ್ಷಿಸಿದ್ದರು. ಆದರೆ ಅವರ ಅಂದಾಜು ತಪ್ಪಿತು. ಪತಿ ಮತ್ತು ಪುತ್ರನು ಸುಮಯ್ಯರಿಗೆ(ರ) ಧೈರ್ಯ ತುಂಬಿದರು.

ಅಬೂಜಹಲ್ ಹುಚ್ಚು ಆವೇಶದಿಂದ ಸುಮಯ್ಯ(ರ) ಅವರ ಮರ್ಮಾಂಗಕ್ಕೆ ಈಟಿಯಿಂದ ತಿವಿದನು. ಅದನ್ನು ಹೊರತೆಗೆದಾಗ ರಕ್ತ ಧಾರೆಯಾಗಿ ಹರಿಯಿತು. ಅಂಗಾತ ಬಿದ್ದ ಆ ವೀರ ಮಹಿಳೆಯು:

"ಅಲ್ಲಾಹು ಅಹದ್. ಲಾ ಇಲಾಹ ಇಲ್ಲಲ್ಲಾಹ್" ಎಂದು ಉದ್ಗರಿಸಿದರು.

ಹೀಗೆ ಅಲ್ಲಾಹನ ಮಾರ್ಗದಲ್ಲಿ ಪ್ರಥಮವಾಗಿ ಹುತಾತ್ಮರಾಗುವ ಸೌಭಾಗ್ಯವನ್ನು ಸುಮಯ್ಯ(ರ) ಎಂಬ ಗುಲಾಮ ಹೆಣ್ಣು ಪಡೆದರು. ಎಲ್ಲ ಕಾಲದ ವೀರ ಮಹಿಳೆಯರಿಗೆ ಸ್ಫೂರ್ತಿಯ ಸೆಲೆಯಾದರು.

---

# ಒಪ್ಪಂದವನ್ನು ಬದಲಿಸಿದ ಯುವತಿ

ಆಕಾಶದಲ್ಲಿ ಉರಿಯುತ್ತಿರುವ ಸೂರ್ಯ, ಕೆಳಗೆ ಧಗಧಗಿಸುವ ಮರಳು, ಮುಂದೆ ನಿರ್ಜನ ಮರುಭೂಮಿ, ಕೊನೆಗಾಣದ ಹಾದಿ. ಆ ಹಾದಿಯಲ್ಲಿ ಉಮ್ಮು ಕುಲ್ಸೂಮ್‌ರು ತ್ವರಿತಗತಿಯಿಂದ ಸಾಗುತ್ತಿದ್ದರು.

ಉಮ್ಮುಕುಲ್ಸೂಮ್‌ರು ಅಮವಿ ಗೋತ್ರಕ್ಕೆ ಸೇರಿದವರು. ಉಕ್ಬಾನ ಮುದ್ದಿನ ಪುತ್ರಿ. ವಲೀದ್‌ನ ನೆಚ್ಚಿನ ಸಹೋದರಿ.

ಅಮವಿ ಗೋತ್ರದವರು ಪ್ರವಾದಿ(ಸ) ಮತ್ತು ಅನುಚರರ ಕಡು ವೈರಿ ಗಳಾಗಿದ್ದರು. ಪ್ರವಾದಿವರ್ಯರನ್ನು(ಸ) ಕೊಲ್ಲಲು ಅವರು ಹಲವು ಬಾರಿ ಸಂಚು ಹೂಡಿದ್ದರು. ಅವು ವಿಫಲವಾದುವು. ಕೊನೆಗೆ ಪ್ರವಾದಿವರ್ಯರು(ಸ) ಮದೀನಾಕ್ಕೆ ವಲಸೆ ಹೋದರು.

ಆದರೂ ಅವರ ವೈರ ಕಡಿಮೆಯಾಗಲಿಲ್ಲ. ಅವರು ಮಕ್ಕಾದ ಇತರ ನಿವಾಸಿಗಳ ಜತೆಗೂಡಿ ಇಸ್ಲಾಮ್ ಮತ್ತು ಮುಸ್ಲಿಮರನ್ನು ನಾಶಪಡಿಸಲು ತೀವ್ರವಾಗಿ ಪ್ರಯತ್ನಿಸಿದರು. ತತ್ಪರಿಣಾಮವಾಗಿ ಬದ್ರ್, ಉಹುದ್ ಇತ್ಯಾದಿ ಸಮರಗಳು ನಡೆದವು.

ಉಮ್ಮು ಕುಲ್ಸೂಮ್‌ರು(ರ) ಆಕರ್ಷಕ ಮೈಕಟ್ಟಿನ ಸುಂದರ ತರುಣಿಯಾಗಿದ್ದರು. ಅವರು ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಬೆಳೆದಿದ್ದರು. ಸುಖ ಸೌಲಭ್ಯಗಳಲ್ಲಿ ಬಾಳಿದ ಉಮ್ಮು ಕುಲ್ಸೂಮ್‌ರಿಗೆ ಕಷ್ಟದ ಅರಿವಿರಲಿಲ್ಲ. ಅವರು ತಂದೆ ಮತ್ತು ಸಹೋದರರ ಕಣ್ಮಣಿಯಾಗಿದ್ದರು. ಆದ್ದರಿಂದ ಅವರು ಆಕೆಯನ್ನು ಚೆನ್ನಾಗಿ ನೋಡಿಕೊಂಡಿದ್ದರು.

ಇಸ್ಲಾಮಿನ ಪ್ರಭಾವವು ಅಪಾರ ಮತ್ತು ಪ್ರಬಲವಾಗಿತ್ತು. ಅದರತ್ತ ಒಲಿದವರನ್ನು ಯಾವ ಶಕ್ತಿಯಿಂದಲೂ ಹಿಂಜರಿಸಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ರಕ್ತ ಸಂಬಂಧ, ಕುಟುಂಬ ಪ್ರೇಮ ಮತ್ತು ಗೋತ್ರ ಭಾವನೆಗಳ ಕೋಟೆಗಳನ್ನು ಕೆಡವಿ ಸತ್ಯವಿಶ್ವಾಸವು ಮಾನವರ ಮನಸ್ಸುಗಳಲ್ಲಿ ನೆಲೆಸಿತು. ಪ್ರತಿಕೂಲ ಪರಿಸ್ಥಿತಿಗಳನ್ನು ನಿರ್ಲಕ್ಷಿಸಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದವರಲ್ಲಿ ಪುರುಷರಂತೆಯೇ ಅನೇಕ ಸ್ತ್ರೀಯರೂ ಇದ್ದರು. ಆ ಪೈಕಿ ಉಮ್ಮು ಕುಲ್ಸೂಮ್ ಅವರು ಅವಿಸ್ಮರಣೀಯರಾಗಿದ್ದಾರೆ. ಅವರು ಇಸ್ಲಾಮ್ ಧರ್ಮ ಸ್ವೀಕರಿಸಿದ ವಿಷಯ ಯಾರಿಗೂ ತಿಳಿದಿರಲಿಲ್ಲ. ಅದು ಅಷ್ಟೊಂದು ಗೌಪ್ಯವಾಗಿ ನಡೆದಿತ್ತು. ತಂದೆ, ಸಹೋದರ ಹಾಗೂ ಕುಟುಂಬದ ಇತರ ಸಂಬಂಧಿಕರಿಗೆ ತಿಳಿದರೆ ತನ್ನ ಅವಸ್ಥೆಯೇನಾದೀತೆಂದು ಅವರಿಗೆ ಚೆನ್ನಾಗಿ ತಿಳಿದಿತ್ತು. ಮಕ್ಕಾದ ಬಹುದೇವ ವಿಶ್ವಾಸಿಗಳಿಗೆ ಮುಸ್ಲಿಮರೊಂದಿಗಿದ್ದ ಕ್ರೂರ ಹಗೆತನವನ್ನೂ ಅವರು ಅರಿತಿದ್ದರು. ಆ ಜನರು ಸುಮಯ್ಯರನ್ನು ಕ್ರೂರವಾಗಿ ವಧಿಸಿದ್ದರು. ಅಮ್ಮಾರ್, ಯಾಸಿರ್ ಮತ್ತು ಖಬ್ಬಾಬ್‌ರನ್ನು ನಿರ್ದಯವಾಗಿ ಹಿಂಸಿಸಿದ್ದರು. ಬಿಲಾಲ್ ಬಿನ್ ರಬಾಹ್‌ರನ್ನು ಬಿಸಿಲಿನ ಧಗೆಯಿಂದ ಉರಿಯುತ್ತಿರುವ ಮರುಭೂಮಿಯಲ್ಲಿ ಮಲಗಿಸಿ ಎಳೆದಿದ್ದರು.

'ತನ್‌ಈಮ್'ನ ಮನೆತನದಲ್ಲಿದ್ದುಕೊಂಡು ತನ್ನ ವಿಶ್ವಾಸವನ್ನು ಸಂರಕ್ಷಿಸಿ ಇಸ್ಲಾಮಿ ಜೀವನ ಸಾಗಿಸಲು ಸಾಧ್ಯವಿಲ್ಲವೆಂದು ಉಮ್ಮುಕುಲ್ಸೂಮ್‌ರಿಗೆ ಖಚಿತ ವಾಯಿತು. ಆದ್ದರಿಂದ ಅವರು ಪ್ರವಾದಿವರ್ಯರ(ಸ) ಜತೆಗೂಡಲು ಹಂಬಲಿಸಿದರು. ಆದರೆ ಅದು ಸುಲಭದ ಕೆಲಸವಾಗಿರಲಿಲ್ಲ. ಪ್ರವಾದಿ(ಸ) ಮತ್ತು ಅನುಚರರು ಮದೀನಾ ದಲ್ಲಿದ್ದರು. ಅಲ್ಲಿಗೆ ಸುಮಾರು 600 ಕಿ.ಮಿ. ದೂರವಿತ್ತು. ಅವಿವಾಹಿತ ಸುಂದರ ತರುಣಿಯೊಬ್ಬಳು ಒಂಟಿಯಾಗಿ ಪಯಣಿಸಿ ಅಲ್ಲಿಗೆ ತಲುಪುವುದು ಅಸಾಧ್ಯದ ಮಾತಾಗಿತ್ತು. ಅದೂ ಮರುಭೂಮಿಯಲ್ಲಿ. ಸೂರ್ಯ ಮೇಲೇರಿದಂತೆ ಮರುಭೂಮಿ ಬಿಸಿಯಾಗಲಾರಂಭಿಸುತ್ತದೆ. ಸೂರ್ಯನು ನಡು ನೆತ್ತಿಯಲ್ಲಿರುವಾಗ ನೆಲವು ಅಕ್ಷರಶಃ ಕುದಿಯುತ್ತದೆ. ಆಗಾಗ್ಗೆ ಬಿಸಿ ಗಾಳಿ ಬೀಸುತ್ತದೆ. ದೃಢಕಾಯದವರಿಂದಲೂ ಅದನ್ನು ತಾಳಿಕೊಳ್ಳಲಾಗುವುದಿಲ್ಲ. ಹೀಗಿರುತ್ತಾ ಮನೆಯೊಳಗಿದ್ದ ಕೋಮಲ ದೇಹದ ಕುಲೀನ ಹೆಣ್ಣಿನ ದೇಹವು ಅದನ್ನು ತಾಳೀತೇ?

ಆದರೂ ಉಮ್ಮು ಕುಲ್ಸೂಮ್ ಆ ಸಾಹಸಕ್ಕೆ ಇಳಿದರು. ಬಂಧು ಮಿತ್ರರಿಗೆ ತಿಳಿಯದಂತೆ ಮನೆಯಿಂದ ಹೊರಟರು. ಮದೀನಾದ ಅದಮ್ಯ ಹಂಬಲದಿಂದ ಎಲ್ಲವನ್ನೂ ಮರೆತರು. ಮರುಭೂಮಿಯ ದುಸ್ತರ ಯಾತ್ರೆ ಮತ್ತು ಪಯಣದ ದೂರವನ್ನು ಅವರು ಗಮನಿಸಲಿಲ್ಲ. ಪ್ರವಾದಿ(ಸ) ಮತ್ತು ಅನುಚರರ ಬಳಿಗೆ ಹೋಗಬೇಕು. ಅವರ ಆದರ್ಶ ಸಂಬಂಧದಲ್ಲಿ ಸೇರಬೇಕು ಎಂಬುದರ ಹೊರತು ಬೇರೇನನ್ನೂ ಆಲೋಚಿಸಲಿಲ್ಲ.

ಹುಟ್ಟಿ ಬೆಳೆದ ತನ್‌ಈಮ್ ಪ್ರದೇಶ ಮತ್ತು ಅಲ್ಲಿರುವ ಸ್ವಂತ ಮನೆಗೆ ಅವರು ವಿದಾಯ ಹೇಳಿದರು. ಅವುಗಳನ್ನು ಕೊನೆಯ ಬಾರಿಗೆ ನೋಡುವಾಗ ಅವರ ಕಣ್ಣುಗಳು ಹನಿಗೂಡಿದವು. ಚಿಕ್ಕಂದಿನಿಂದಲೇ ಓಡಾಡಿದ ಮನೆ ಮತ್ತು ಊರನ್ನು ತೊರೆಯುವಾಗ ದುಃಖವಾಗದಿದ್ದೀತೇ? ಬಂಧು ಮಿತ್ರಾದಿಗಳನ್ನು ತೊರೆದು ಹೋಗುವಾಗ ಮೈಮನಗಳು ಅಳುಕದಿದ್ದೀತೇ?

ಉಮ್ಮುಕುಲ್ಸೂಮ್‌ರು ಮದೀನಾವನ್ನು ಗುರಿಯಾಗಿಸಿ ಸಾಗಿದರು. ಅದು ಎಲ್ಲಿದೆ ಎಂದು ಅವರಿಗೆ ತಿಳಿದಿರಲಿಲ್ಲ. ದಾರಿಯ ಪರಿಚಯವೂ ಇರಲಿಲ್ಲ. ಯಾರೋ ಹೇಳಿದ್ದನ್ನು ಮಾತ್ರ ಕೇಳಿದ್ದರು. ಅವರು ಈ ಹಿಂದೆ ಒಮ್ಮೊಮ್ಮೆ ಸಂಬಂಧಿಕರ ಮನೆಯಲ್ಲಿ ಉಳಕೊಳ್ಳುತ್ತಿದ್ದರು. ಆದ್ದರಿಂದ ಮನೆಯವರು ಅವರ ನಿರ್ಗಮನವನ್ನು ವಿಶೇಷವಾಗಿ ಪರಿಗಣಿಸಲಿಲ್ಲ. ಮಾವಂದಿರ ಅಥವಾ ಇತರ ಸಂಬಂಧಿಕರ ಮನೆಗೆ ಹೋಗಿರಬಹುದೆಂದು ಅವರು ಭಾವಿಸಿದರು. ಉಮ್ಮುಕುಲ್ಸೂಮ್‌ರು ಪ್ರಯಾಣದ ಕುರಿತು ಯಾರಿಗೂ ಹೇಳಿರಲಿಲ್ಲ. ಆದರೂ ಯಾರಿಗೂ ಕಾಣಸಿಗದಂತೆ ಎಚ್ಚರಿಕೆಯಿಂದ ಮುಂದೆ ಸಾಗಿದರು. ಮಕ್ಕಾದ ಗಡಿ ದಾಟಿ ಸ್ವಲ್ಪ ದೂರ ಸಾಗಿದ ಬಳಿಕ ಸೂರ್ಯ ತಾಪವೂ ವಿಪರೀತವಾಯಿತು. ಅಗ್ನಿಕುಂಡದಂತೆ ಸುತ್ತಮುತ್ತಲಿನಿಂದ ಬಿಸಿಗಾಳಿ ಬೀಸಿತು. ಎಳೆ ಸಸಿಯಂತಿದ್ದ ಅವರ ಕೋಮಲ ದೇಹವು ತರಗೆಲೆಯಂತೆ ಬಾಡಿತು. ಕಣ್ಣು ಕಪ್ಪಿಟ್ಟಿತು. ಕಾಲುಗಳು ನಡುಗಿದವು. ಆದರೂ ಮನಸ್ಸು ಮುರಿಯಲಿಲ್ಲ. ಆದ್ದರಿಂದ ಆದಷ್ಟು ಬೇಗ ಮುಂದೆ ಸಾಗಿದರು.

ಒಬ್ಬರು ಅನಿರೀಕ್ಷಿತವಾಗಿ ತಮ್ಮತ್ತ ಬರುವುದನ್ನು ಉಮ್ಮುಕುಲ್ಸೂಮ್‌ರು ನೋಡಿದರು. ಇದಿರು ಬದಿಯಿಂದ ಬರುತ್ತಿರುವುದರಿಂದ ಅದು ತನ್ನ ಸಂಬಂಧಿಕರಲ್ಲ ವೆಂದು ವ್ಯಕ್ತವಾಯಿತು. ಆದ್ದರಿಂದ ಸ್ವಲ್ಪ ಸಮಾಧಾನವಾದರೂ ನಿರ್ಜನ ಮರುಭೂಮಿ ಯಲ್ಲಿ ಅಪರಿಚಿತ ಪುರುಷನ ಕೈಗೆ ಸಿಕ್ಕಿ ಬೀಳುವ ಪರಿಸ್ಥಿತಿಯನ್ನು ನೆನೆಸಿ ಕಂಗಾಲಾದರು. ಕೊನೆಗೆ ಅವರ ಭೀತಿಯನ್ನು ಮತ್ತಷ್ಟು ಹೆಚ್ಚಿಸಿ ಆ ವ್ಯಕ್ತಿಯು ತನ್ನ ಒಂಟೆಯನ್ನು ತಂದು ಅವರ ಮುಂದೆ ನಿಲ್ಲಿಸಿದನು.

ಆಗಂತುಕನ ಕಣ್ಣುಗಳು ಉಮ್ಮುಕುಲ್ಸೂಮ್‌ರನ್ನು ದಿಟ್ಟಿಸುತ್ತಿದ್ದವು. ಆ ವ್ಯಕ್ತಿಗೆ ತನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ. ನಿರ್ಜನ ಮರುಭೂಮಿಯಲ್ಲಿ ಓರ್ವ ಸುರಸುಂದರಿ! ಆತ ಆಶ್ಚರ್ಯ ಚಕಿತನಾದ.

"ಹೇ ಅಲ್ಲಾಹ್! ಕುಫ್ರ್‌ನ ಕೋಟೆಯಿಂದ ರಕ್ಷಿಸಿದ ನೀನು ನನ್ನನ್ನು ರಾಕ್ಷಸರ ಕೈಗೆ ಒಪ್ಪಿಸುತ್ತಿರುವೆಯಾ? ಪ್ರಭೂ! ನೀನು ನನ್ನನ್ನು ರಕ್ಷಿಸು. ನನ್ನ ಮಾನ ಅಪಹರಿಸಲು ಯಾರಿಗೂ ಅವಕಾಶ ನೀಡಬೇಡ" ಉಮ್ಮುಕುಲ್ಸೂಮ್‌ರು ದೈನ್ಯದಿಂದ ಪ್ರಾರ್ಥಿಸಿದರು. ಆಗಂತುಕನು ಒಂಟೆಯಿಂದ ಸರಿದು ದೂರನಿಂತ. ಅವರ ಈ ವರ್ತನೆಯಿಂದ ಉಮ್ಮುಕುಲ್ಸೂಮ್‌ರಿಗೆ ಸ್ವಲ್ಪ ಸಮಾಧಾನವಾಯಿತು.

"ಅರೇಬಿಯಾದ ಮಹಿಳೆಯರಲ್ಲಿ ಅತಿ ಸುಂದರಿ ಮತ್ತು ಕುಲೀನ ಕುಟುಂಬ ದವಳಂತೆ ತೋರುವ ಹೆಣ್ಣೇ! ನೀನು ಒಂಟಿಯಾಗಿ ಎಲ್ಲಿಗೆ ಹೊರಟಿರುವೆ? ಮೌನವನ್ನು ಮುರಿದು ಆಗಂತುಕ ಪ್ರಶ್ನಿಸಿದ.

ಆತ ಯುದ್ಧಕ್ಕೆ ಹೊರಟ ಶಸ್ತ್ರಧಾರಿಯಾಗಿದ್ದರೂ ಆತನ ಮಾತು ಮೃದುವಾಗಿತ್ತು. ಇದರಿಂದ ಉಮ್ಮುಕುಲ್ಸೂಮ್‌ರಿಗೆ ಸ್ವಲ್ಪ ಧೈರ್ಯ ಬಂತು. ಅವರು ಹೇಳಿದರು. "ನನ್ನ ಕಥೆ ಮತ್ತು ಪ್ರಯಾಣದ ವಿವರವನ್ನು ಮತ್ತೆ ತಿಳಿಸುತ್ತೇನೆ. ಅದಕ್ಕಿಂತ ಮುಂಚೆ ನೀವು ಯಾರೆಂದು ತಿಳಿಸಿರಿ."

"ನಾನು 'ಖುದಾಅ' ಗೋತ್ರಕ್ಕೆ ಸೇರಿದವನು. ಮಕ್ಕಾಕ್ಕೆ ಹೋಗುತ್ತಿದ್ದೇನೆ" ಆತ ಸಂಕ್ಷಿಪ್ತವಾಗಿ ಪರಿಚಯ ಹೇಳಿದ.

'ಅಲ್‌ಹಮ್ದುಲಿಲ್ಲಾಹ್'(ಸರ್ವಸ್ತುತಿಯೂ ಅಲ್ಲಾಹನಿಗೆ) ಉಮ್ಮುಕುಲ್ಸೂಮ್ ನೆಮ್ಮದಿಯ ನಿಟ್ಟುಸಿರು ಬಿಟ್ಟರು.

"ನೀನು ಅಲ್ಲಾಹನನ್ನು ಸ್ತುತಿಸಲು ಕಾರಣವೇನು?" ಯಾತ್ರಿಕ ವಿಚಾರಿಸಿದ.

"ನಾನು ತುಂಬಾ ಹೆದರಿದ್ದೆ. ನಿಮ್ಮನ್ನು ದರೋಡೆಕೋರನೆಂದು ಭಾವಿಸಿದ್ದೆ. ಈಗ ನಾನು ನಿರ್ಭೀತಳಾಗಿದ್ದೇನೆ. ಏಕೆಂದರೆ ನೀವು ಪ್ರವಾದಿಯವರೊಂದಿಗೆ(ಸ) ಒಪ್ಪಂದ ಮಾಡಿಕೊಂಡ ಗೋತ್ರಕ್ಕೆ ಸೇರಿದ್ದೀರಿ. ಮುಸ್ಲಿಮಳಾಗಿರುವ ನಾನು ನಿಮ್ಮ ಬಗ್ಗೆ ಸಂಶಯಪಡಬೇಕಾಗಿಲ್ಲ. ಈಗ ನನಗೆ ನೆಮ್ಮದಿಯಾಯಿತು" ಉಮ್ಮುಕುಲ್ಸೂಮ್ ನಿರಾಳವಾಗಿ ಹೇಳಿದರು.

"ನೀನು ಎಲ್ಲಿಂದ ಬಂದೆ ಎಂದು ತಿಳಿಸಿಲ್ಲವಲ್ಲಾ" ಎಂದು ಆಗಂತುಕ ಕೇಳಿದ.

"ನಾನು ಅಮವಿ ಕುಟುಂಬದವಳು. ಉಕ್ಬಾರ ಪುತ್ರಿ. ನನ್ನ ಕುಟುಂಬದವರೆಲ್ಲರೂ ಇಸ್ಲಾಮಿನ ಕಡುವೈರಿಗಳಾಗಿದ್ದಾರೆ. ಆದರೆ ನಾನು ಸತ್ಯಧರ್ಮವನ್ನು ಸ್ವೀಕರಿಸಿದ್ದೇನೆ. ಈಗ ಮಕ್ಕಾದಿಂದ ರಹಸ್ಯವಾಗಿ ಮದೀನಾಕ್ಕೆ ಹೋಗುತ್ತಿದ್ದೇನೆ. ಹೇಗಾದರೂ ಪ್ರವಾದಿವರ್ಯರ(ಸ) ಬಳಿಗೆ ಹೋಗಬೇಕು. ಅದೇ ನನ್ನ ಗುರಿ." ಉಮ್ಮುಕುಲ್ಸೂಮ್‌ರು ವಿವರವಾಗಿ ಹೇಳಿದರು.

"ನಿನ್ನನ್ನು ನನ್ನ ಸ್ವಂತ ಸಹೋದರಿಯೆಂಬ ಭಾವನೆಯಿಂದ ನಾನು ಪ್ರವಾದಿ ಮುಹಮ್ಮದ್‌ರ(ಸ) ಬಳಿಗೆ ತಲುಪಿಸುತ್ತೇನೆ" ಆಗಂತುಕ ಹೇಳಿದ. "ಬೇಡ ನಾನೊಬ್ಬಳೇ ಹೋಗುತ್ತೇನೆ. ನನ್ನಿಂದಾಗಿ ನಿಮ್ಮ ಯಾತ್ರೆಗೆ ಅಡ್ಡಿಯಾಗದಿರಲಿ."

"ನಡೆದು ಹೋಗುವುದೇ, ಖಂಡಿತ ಸಾಧ್ಯವಿಲ್ಲ. ಬಿಸಿಲಿನ ಉರಿ, ಹಸಿವು ದಾಹದಿಂದ ಸಾಯಬೇಕಾದೀತು. ಬಿಸಿ ಗಾಳಿಯಿಂದ ರೂಪುತಾಳುವ ಮರಳ ದಿಣ್ಣೆಯಲ್ಲಿ ನೀನು ಸಮಾಧಿಯಾಗಬಹುದು. ಆದ್ದರಿಂದ ಅವಿವೇಕದಿಂದ ವರ್ತಿಸದೇ ಈ ಒಂಟೆಯ ಮೇಲೇರು. ಸುರಕ್ಷಿತವಾಗಿ ನಾನು ನಿನ್ನನ್ನು ಗುರಿ ತಲುಪಿಸುತ್ತೇನೆ. ಆ ವ್ಯಕ್ತಿ ಭರವಸೆ ನೀಡಿದರು.

ಬಹಳ ಒತ್ತಾಯದ ಬಳಿಕ ಉಮ್ಮುಕುಲ್ಸೂಮ್‌ರು ಒಂಟೆಯ ಮೇಲೇರಿ ಕುಳಿತರು. ಇಬ್ಬರೂ ದುರ್ಗಮ ಮರುಭೂಮಿಯಲ್ಲಿ ಮದೀನಾದತ್ತ ಸಾಗಿದರು. ತಮ್ಮ ಬಳಿಯಿದ್ದ ನೀರು, ಆಹಾರಗಳನ್ನು ಪರಸ್ಪರ ಹಂಚಿಕೊಂಡರು. ಸ್ವಲ್ಪ ದೂರ ಸಾಗಿದ ಬಳಿಕ ಉಮ್ಮು ಕುಲ್ಸೂಮ್ ಅಲ್ಲಾಹನು ತನ್ನ ಪ್ರಾರ್ಥನೆಯನ್ನು ಸ್ವೀಕರಿಸುವನೆಂದು ಖಚಿತಪಡಿಸಿದರು. ಅಸತ್ಯ ಮತ್ತು ಅಧರ್ಮದ ಜನರಿಂದ ಮುಕ್ತಿ ಪಡೆಯಲು ಅವರು ಹಲವು ದಿನ ನಿದ್ದೆಗೆಟ್ಟು ಪ್ರಾರ್ಥಿಸಿದರು. ಮನೆಯಿಂದ ಹೊರಟಾಗ ಮದೀನಾ ತಲುಪುವ ಸಾಧ್ಯತೆಯಿರಲಿಲ್ಲ. ಈಗ ಅನಿರೀಕ್ಷಿತವಾಗಿ ಓರ್ವ 'ಸಹೋದರ' ಅವರಿಗೆ ದೊರೆತಿದ್ದಾರೆ.

ಮದೀನಾ ತಲುಪಿದ ಉಮ್ಮುಕಲ್ಸೂಮ್‌ರು ಪ್ರವಾದಿವರ್ಯರ(ಸ) ಪತ್ನಿ ಉಮ್ಮುಸಬ್ಬಾರ ಮನೆಗೆ ಹೋದರು. ಸಹಯಾತ್ರಿಕ ಅವರನ್ನು ಅಲ್ಲಿ ಬಿಟ್ಟು ಮರಳಿ ಹೋದರು. ಸ್ವಲ್ಪ ಹೊತ್ತಿನ ಬಳಿಕ ಅಲ್ಲಿಗೆ ಆಗಮಿಸಿದ ಪ್ರವಾದಿವರ್ಯರೊಡನೆ(ಸ) ಉಮ್ಮುಕುಲ್ಸೂಮ್‌ರು ತನ್ನ ವೃತ್ತಾಂತವನ್ನು ವಿವರವಾಗಿ ತಿಳಿಸಿದರು. ಅವರು ಇಸ್ಲಾಮ್ ಧರ್ಮ ಸ್ವೀಕರಿಸಿದ್ದು ಅದನ್ನು ಮನೆಯವರಿಗೆ ತಿಳಿಸದೇ ಗುಪ್ತವಾಗಿರಿಸಿದ್ದು, ನಡು ರಾತ್ರಿಯಲ್ಲಿ ಅಲ್ಲಾಹನಲ್ಲಿ ಪ್ರಾರ್ಥಿಸಿದ್ದು, ಬದ್ರ್ ಯುದ್ಧದ ಸುದ್ದಿಯಿಂದ ಹರ್ಷಿತಳಾದದ್ದು. ಉಹುದ್ ಯುದ್ಧದ ಬಳಿಕ ದುಃಖಿಸಿದ್ದು, ಒಬ್ಬಂಟಿಗಳಾಗಿ ಮನೆಯಿಂದ ಹೊರಟದ್ದು, ಮರುಭೂಮಿಯಲ್ಲಿ ಸಂಗಡಿಗ ದೊರೆತದ್ದು ಇತ್ಯಾದಿ ಎಲ್ಲ ವಿಚಾರಗಳನ್ನು ಒಂದೇ ಉಸಿರಿನಲ್ಲಿ ಹೇಳಿ ಮುಗಿಸಿದರು.

ಅವರ ಮಾತುಗಳನ್ನು ಆಲಿಸುತ್ತಿದ್ದ ಪ್ರವಾದಿವರ್ಯರ(ಸ) ಮುಖದಲ್ಲಿ ದುಃಖದ ಛಾಯೆ ಮೂಡಿತು. ಸಂತೋಷದ ಬದಲಾಗಿ ಸಂತಾಪ ವ್ಯಕ್ತವಾಯಿತು. ಉಮ್ಮು ಕುಲ್ಸೂಮ್‌ರ ಮಾತು ಮುಗಿದ ಬಳಿಕ ದೀರ್ಘ ನಿಟ್ಟುಸಿರು ಬಿಟ್ಟು ಹೀಗೆಂದರು: "ನಾನು ಅಸಹಾಯಕ. ಮಕ್ಕಾದ ಅವಿಶ್ವಾಸಿಗಳೊಂದಿಗೆ ಮಾಡಿದ ಒಪ್ಪಂದದನ್ವಯ (ಹುದೈಬಿಯಾ ಒಪ್ಪಂದ) ಮುಸ್ಲಿಮರಾಗಿ ಮಕ್ಕಾದಿಂದ ಇಲ್ಲಿಗೆ ಬರುವವರನ್ನು ನಾನು ಹಿಂದಕ್ಕೆ ಕಳುಹಿಸಬೇಕಾಗಿದೆ. ಒಪ್ಪಂದವನ್ನು ಉಲ್ಲಂಘಿಸ ಬಾರದಷ್ಟೆ." ತರುವಾಯ ಅವರು ಅಬೂಜಂದಲ್ ಮತ್ತು ಇತರರನ್ನು ಹಿಂದಕ್ಕೆ ಕಳುಹಿಸಿದ ವಿಷಯಗಳನ್ನು ತಿಳಿಸಿದರು. ಪ್ರವಾದಿಯವರಿಗೆ(ಸ) ದುಃಖ ಉಮ್ಮಳಿಸುತ್ತಿತ್ತು. ಅವರ ಕಣ್ಣುಗಳು ತುಂಬಿ ಹರಿಯುತ್ತಿದ್ದವು.

ಉಮ್ಮುಕುಲ್ಸೂಮ್‌ರಿಗೆ ಸಿಡಿಲೆರಗಿದಂತಾಯಿತು. ಅವರ ಮನಸ್ಸು ಬಳಲಿತು. ಕೈಕಾಲು ನಡುಗಿದವು. ಅಭಯಕ್ಕಾಗಿ ಬಹಳ ಕಷ್ಟದಿಂದ ಬಂದ ತನ್ನನ್ನು ಪುನಃ ಆ ರಾಕ್ಷಸರಿಗೆ ಒಪ್ಪಿಸುವುದೇ! ಅದನ್ನು ಊಹಿಸಲೂ ಅವರಿಗೆ ಸಾಧ್ಯವಾಗಲಿಲ್ಲ. ಅವರಿಗೆ

ಕತ್ತಲು ಕವಿದಂತಾಯಿತು. ಆದರೂ ಅಲ್ಲಾಹನೇ ನನ್ನ ರಕ್ಷಕನೆಂದು ಅವರ ಮನಸ್ಸು ಪಿಸುಗುಟ್ಟಿತು. ಆದ್ದರಿಂದ ಅವರು ಪ್ರವಾದಿಯವರೊಂದಿಗೆ(ಸ) ಹೀಗೆಂದರು: "ಅಲ್ಲಾಹನ ಪ್ರವಾದಿಗಳೇ ದೃಢ ಮನಸ್ಕ ಪುರುಷರು ಮತ್ತು ಅಬಲೆಯಾದ ನಾವು ಸಮಾನರೇ, ಪುರುಷರಿಗಾದರೋ ಅವರ ಪ್ರಾಣ ಮಾತ್ರ ನಷ್ಟವಾಗುತ್ತದೆ. ಆದರೆ ನಮ್ಮ ಸ್ಥಿತಿ ಹಾಗಲ್ಲವಷ್ಟೆ. ಆದ್ದರಿಂದ ಕರುಣಾಳುವಾದ ಅಲ್ಲಾಹನು ನಮಗೆ ಒಂದು ಪರಿಹಾರವನ್ನು ಸೂಚಿಸದಿರಲಾರನು."

ಅಲ್ಲಾಹನು ಉಮ್ಮುಕುಲ್ಸೂಮ್‌ರ ನಿರೀಕ್ಷೆಯನ್ನು ಪೂರೈಸಿದನು. ಅವರ ಯಾತನೆಯನ್ನು ನೀಗಿಸಿದನು. ನೊಂದ ಮನಸ್ಸಿಗೆ ಸಮಾಧಾನ ನೀಡಿದನು. ಇದರಿಂದ ಪ್ರವಾದಿಯವರ(ಸ) ಪರಿತೃಪ್ತ ಹೃದಯವು ಶಾಂತವಾಯಿತು. ಅಲ್ಲಾಹನು ತಿಳಿಸಿದನು,

"ಸತ್ಯವಿಶ್ವಾಸಿಗಳೇ! ವಿಶ್ವಾಸಿನಿಯರಾದ ಸ್ತ್ರೀಯು ಸ್ವದೇಶವನ್ನು ತೊರೆದು ನಿಮ್ಮ ಬಳಿಬಂದರೆ ಅವರು ಸತ್ಯವಂತರೇ ಎಂದು ಪರಿಶೀಲಿಸಿರಿ. ಅವರ ವಿಶ್ವಾಸವನ್ನು ಅಲ್ಲಾಹನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ಹಾಗೆ ಅವರು ಸತ್ಯವಿಶ್ವಾಸಿನಿಗಳೆಂದು ಖಾತ್ರಿಯಾದರೆ ಅವರನ್ನು ನೀವು ಸತ್ಯನಿಷೇಧಿಗಳಿಗೆ ಮರಳಿಸಬೇಡಿರಿ. ಏಕೆಂದರೆ ಸತ್ಯವಿಶ್ವಾಸಿನಿ ಯರು ನಿಷೇಧಿಗಳಿಗೆ ಧರ್ಮಸಮ್ಮತ(ಹಲಾಲ್)ರಲ್ಲ." (ಅಲ್ ಮುಮ್ತಹಿನಾ: 10)

ಆ ಬಳಿಕ ಹುದೈಬಿಯಾ ಒಪ್ಪಂದದನ್ವಯ ಉಮ್ಮುಕುಲ್ಸೂಮ್‌ರನ್ನು ಹಿಂತಿರುಗಿಸ ಬೇಕೆಂದು ಅವರ ಸಹೋದರರು ಪ್ರವಾದಿಯವರ(ಸ) ಬಳಿ ಬಂದು ಹೇಳಿದರು. ಪ್ರವಾದಿಯವರು(ಸ) ಹೀಗೆ ಉತ್ತರಿಸಿದರು, "ಅಲ್ಲಾಹನು ತನ್ನ ಅಬಲೆಯರಾದ ದಾಸರ ಮೇಲೆ ಕರುಣೆ ತೋರಿಸಿದ್ದಾನೆ. ಆದ್ದರಿಂದ ಒಪ್ಪಂದದಲ್ಲಿ ಮಹಿಳೆಯರು ಸೇರು ವುದಿಲ್ಲ." ತರುವಾಯ ಪ್ರವಾದಿಯವರು(ಸ) ಮೇಲಿನ ಕುರ್‌ಆನ್ ಸೂಕ್ತವನ್ನು ಓದಿ ಹೇಳಿದರು.

---

# ಅಪವಾದದ ಸುಳಿಯಲ್ಲಿ

ಪ್ರವಾದಿ ಪತ್ನಿ ಆಯಿಶಾರವರು(ರ) ಮುಸುಕೆಳೆದು ಮಲಗಿದ್ದಾರೆ. ತೀವ್ರ ಜ್ವರ ದಿಂದ ಮೈ ಕಾವೇರಿದೆ. ಕೈಕಾಲುಗಳು ಕಂಪಿಸುತ್ತಿವೆ. ಹಲವು ದಿನಗಳಿಂದ ಅವರು ಅನಾರೋಗ್ಯದಿಂದ ಬಳಲುತ್ತಿದ್ದಾರೆ. ಅದರೊಂದಿಗೆ ಮಾನಸಿಕ ಚಿಂತೆಯೂ ಅವರನ್ನು ಕಂಗೆಡಿಸಿತ್ತು. ಎಲ್ಲರೂ ಅವರೊಂದಿಗೆ ವಿಚಿತ್ರ ರೀತಿಯಲ್ಲಿ ವರ್ತಿಸುತ್ತಿದ್ದಾರೆ. ಪ್ರವಾದಿ ವರ್ಯರು(ಸ) ಕೂಡಾ ಹಿಂದಿನಂತೆ ಪ್ರೀತಿ ತೋರಿಸುತ್ತಿಲ್ಲ. ಪ್ರೇಮ ವಾತ್ಸಲ್ಯದಿಂದ ವರ್ತಿಸುತ್ತಿಲ್ಲ. ಔಪಚಾರಿಕವಾಗಿ ಒಮ್ಮೆ ಬಂದು ಹೋಗುತ್ತಾರೆ. ಪತಿಯ ಮುಖಭಾವದಿಂದ

ಅವರು ಸಂಶಯ ಗ್ರಸ್ತರಾಗುತ್ತಾರೆ. ಆ ಮುಖದಲ್ಲಿ ದ್ವೇಷ ಕಾಣುತ್ತಿದೆ. ಮನಸ್ತಾಪದ ಚಿಹ್ನೆ ಗೋಚರಿಸುತ್ತಿದೆ. ಆದರೂ ಆಯಿಶಾರಿಗೆ(ರ) ಅದರ ಕಾರಣವನ್ನು ಅರ್ಥಮಾಡಿಕೊಳ್ಳ ಲಾಗಲಿಲ್ಲ. ಎಲ್ಲರೂ ತನ್ನಿಂದ ಏನನ್ನೋ ಅಡಗಿಸುತ್ತಿರುವಂತೆ ಅವರಿಗೆ ತೋರುತ್ತಿದೆ.

ಆಯಿಶಾರು(ರ) ತಾಯಿಯ ಮುಖವನ್ನು ದೈನ್ಯದಿಂದ ನೋಡಿದರು. ಅವರ ವಿಷಾದ ತುಂಬಿದ ಮುಖವನ್ನು ನೋಡಿ ಆಯಿಶಾರ(ರ) ಖಿನ್ನತೆ ಹೆಚ್ಚಿತು. ಆಯಿಶಾ(ರ) ತಂದೆಯ ಮುಖ ನೋಡಿದರು. ಅವರ ಮುಖದಲ್ಲಿಯೂ ದುಃಖ ಆವರಿಸಿತ್ತು.

"ಅಮ್ಮಾ, ನಾನು ಅನಾರೋಗ್ಯದಿಂದ ಸ್ವಲ್ಪ ಬಳಲಿದರೆ ಅತ್ಯಧಿಕ ಕನಿಕರ ಮತ್ತು ಸಹಾನುಭೂತಿ ತೋರಿಸುತ್ತಿದ್ದ ಪ್ರವಾದಿಯವರು(ಸ) ಈಗ ಹೀಗೇಕೆ ವರ್ತಿಸು ತ್ತಿದ್ದಾರೆ?" ಆಯಿಶಾರು(ರ) ದೀನ ಸ್ವರದಲ್ಲಿ ಕೇಳಿದರು.

"ಚಿಂತಿಸಬೇಡ ಮಗಳೇ, ಅವರಿಗೆ ನಿನ್ನಲ್ಲಿ ತುಂಬಾ ಪ್ರೀತಿಯಿದೆ. ಇತರ ಪತ್ನಿಯರು ವಿನೋದಕ್ಕಾಗಿ ಏನೋ ಹೇಳಿರಬೇಕು. ಇದೆಲ್ಲವೂ ನಿನ್ನ ಭ್ರಮೆ ಎಂದು ತಾಯಿ ಝೈನಬ(ರ) ಸಮಾಧಾನ ಹೇಳಿದರು. ಅಷ್ಟರಲ್ಲಿ ಪ್ರವಾದಿಯವರ(ಸ) ಮುಖವು ವಿಷಣ್ಣವಾಗಿತ್ತು. ಅವರು ಝೈನಬ್‌ರತ್ತ(ರ) ತಿರುಗಿ" 'ಹೇಗಿದೆ'? ಎಂದು ವಿಚಾರಿಸಿದರು."

'ಸುಖವಾಗಿದ್ದಾಳೆ' ಅವರು ಉತ್ತರಿಸಿದರು. ಪ್ರವಾದಿಯವರು(ಸ) ಆಯಿಶಾರ(ರ) ಬಳಿ ಹೋಗಿ ವಿಚಾರಿಸದೇ ಆ ಕೂಡಲೇ ಅಲ್ಲಿಂದ ಹೊರಟು ಹೋದರು. ಇದರಿಂದ ಆಯಿಶಾರ(ರ) ದುಃಖ ಮತ್ತಷ್ಟು ಹೆಚ್ಚಿತು. ಅವರು ಸೇವಕಿ ಉಮ್ಮು ಮಿಸ್‌ತ್ವಲ್‌ರತ್ತ ತಿರುಗಿ "ನೋಡಿದೆಯಾ! ಪ್ರವಾದಿವರ್ಯರು(ಸ) ಬಂದ ಕೂಡಲೇ ಹೊರಟು ಹೋದರಲ್ಲವೇ ಅವರು ನನ್ನೊಂದಿಗೆ ಒಂದು ಮಾತೂ ಆಡಲಿಲ್ಲ. ಅವರು ನನ್ನ ಬಗ್ಗೆ ಬಹಳವಾಗಿ ಕೋಪಿಸಿಕೊಂಡಿದ್ದಾರೆ."

ಉಮ್ಮು ಮಿಸ್‌ತ್ವಲ್‌ರು ದೀರ್ಘ ನಿಟ್ಟುಸಿರು ಬಿಡುತ್ತಾ, "ಮಿಸ್‌ತ್ವಲ್ ನಾಶವಾಗಲಿ!" ಎಂದು ಹೇಳಿದರು.

ಆಯಿಶಾರಿಗೆ(ರ) ಆ ಮಾತು ಅರ್ಥವಾಗಲಿಲ್ಲ. ಓರ್ವ ತಾಯಿಯು ತನ್ನ ಮಗನನ್ನೇ ಹಳಿಯುವುದೇ? ಆ ಪುತ್ರನಾದರೋ ಓರ್ವ ಮುಹಾಜಿರ್ ಮತ್ತು ಬದ್ರ್‌ನಲ್ಲಿ ಭಾಗ ವಹಿಸಿದ ಸಹಾಬಿಯಾಗಿದ್ದರು. ಆಯಿಶಾರು(ರ) ಈ ಕುರಿತು ವಿಚಾರಿಸಿದರು. ಉಮ್ಮು ಮಿಸ್‌ತ್ವಲ್ ಎಲ್ಲ ವಿಷಯವನ್ನು ಬಹಿರಂಗಪಡಿಸಲು ನಿರ್ಧರಿಸಿದರು. ಕಳೆದೊಂದು ತಿಂಗಳಲ್ಲಿ ಜನರಾಡಿಕೊಳ್ಳುತ್ತಿರುವ ಮಾತುಗಳ ಸಾರಾಂಶವನ್ನು ಆಯಿಶಾರಿಗೆ(ರ) ತಿಳಿಸಿದರು. ಅವರು ಹೇಳಿದರು: "ಮಗೂ! ಜನರ ಮಾತುಗಳನ್ನು ಆಲಿಸುವಾಗ ಕರುಳು ಕಿತ್ತಂತಾಗುತ್ತದೆ. ಬನೂ ಮುಸ್ತಲಿಕ್ ಯುದ್ಧದಿಂದ ಮರಳುವಾಗ ನೀನು ಮತ್ತು ಸಫ್ವಾನ್ ಒಟ್ಟಿಗೇ ಇದ್ದುದನ್ನು ಮಿಸ್‌ತ್ವಲ್ ನೋಡಿದ್ದಾನಂತೆ. ನೀನೊಬ್ಬಳೇ ಸಫ್ವಾನ್‌ನ ಜೊತೆ ಆತನ ಒಂಟೆಯಲ್ಲಿ ಕುಳಿತಿದ್ದೆಯಂತೆ. ಈ ವಿಷಯವನ್ನು ಎಲ್ಲರೂ ಅರಿತಿದ್ದಾರೆ. ಪ್ರವಾದಿಯವರಿಗೆ(ಸ) ಅದು ಗೊತ್ತಾಗಿರಬೇಕು."

ಈ ಮಾತುಗಳನ್ನು ಕೇಳಿ ಆಯಿಶಾರ(ರ) ದುಃಖದ ಕಟ್ಟೆಯೊಡೆಯಿತು. ಅವರು ಪುಟ್ಟ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತರು. ಅಪವಾದ ಪ್ರಚಾರಕ್ಕೆ ಗುರಿಯಾದ ನಿರಪರಾಧಿ ಬಾಲೆಯ ಮನೋವ್ಯಥೆ ಅವರ್ಣನೀಯವಾಗಿತ್ತು.

ತಾಯಿ ಮತ್ತು ಸೇವಕಿಯು ಅವರನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದರೂ ಯಶಸ್ವಿಯಾಗಲಿಲ್ಲ. ಆಯಿಶಾರು(ರ) ನಡೆದ ಘಟನೆಯನ್ನು ಸ್ಪಷ್ಟವಾಗಿ ವಿವರಿಸ ತೊಡಗಿದರು. ಸಂಬಂಧಿಕರು ಮತ್ತು ಸಮಾಜವು ತನ್ನ ಮಾತನ್ನು ನಂಬದೆಂದು ಅವರಿಗೆ ತಿಳಿದಿತ್ತು. ಅಪವಾದಕ್ಕೆ ಗುರಿಯಾದ ಹೆಣ್ಣಿನ ಮಾತನ್ನು ಯಾರು ತಾನೇ ನಂಬುತ್ತಾರೆ. ಆದರೂ ಅದರಿಂದ ತನ್ನ ಮನಸ್ಸಿಗಾದರೂ ನೆಮ್ಮದಿಯಾದೀತೆಂಬ ಭಾವನೆಯಿಂದ ಅವರು ಹೇಳತೊಡಗಿದರು:

"ಸಾಮಾನ್ಯವಾಗಿ ಪ್ರವಾದಿಯವರು(ಸ) ಯುದ್ಧಕ್ಕೆ ಹೋಗುವಾಗ ಜತೆಗೆ ಕರೆದೊಯ್ಯುವ ಪತ್ನಿಯನ್ನು ಅದೃಷ್ಟ ಚೀಟಿ ಹಾಕಿ ಆಯ್ಕೆ ಮಾಡುತ್ತಾರೆಂದು ನಿಮಗೆ ತಿಳಿದಿದೆ. ಈ ಬಾರಿ ನಾನು ಆಯ್ಕೆಗೊಂಡೆ, ಆದ್ದರಿಂದ ನಾನು ಪ್ರವಾದಿಯವರ(ಸ) ಜತೆ ಪಯಣಿಸಿದೆ. ಯುದ್ಧ ಮುಗಿಸಿ ಮರಳುವಾಗ ಮದೀನಾದ ಸಮೀಪ ಸ್ಥಳ ವೊಂದರಲ್ಲಿ ತಂಗಿದೆವು. ತುಂಬಾ ಹೊತ್ತು ಅಲ್ಲಿಯೇ ಉಳಿದುಕೊಂಡೆವು. ಆ ವೇಳೆ ವಿಸರ್ಜನೆಗಾಗಿ ಸ್ವಲ್ಪ ದೂರಹೋದೆ. ಅಲ್ಲಿಂದ ಮರಳಿ ಬರುವಾಗ ನನ್ನ ಕುತ್ತಿಗೆ ಯಲ್ಲಿರುವ ಸರ ಕಾಣಿಸಲಿಲ್ಲ. ನಾನು ಕಳವಳದಿಂದ ಅದನ್ನು ಹುಡುಕ ತೊಡಗಿದೆ. ಹಿಂತಿರುಗಿ ಬರುವಾಗ ಪ್ರವಾದಿ(ಸ) ಮತ್ತು ಅವರ ಸೇನೆ ಹಿಂತಿರುಗಿ ಹೋಗಿತ್ತು. ನಾನು ಪಲ್ಲಕ್ಕಿಯಲ್ಲಿ ಕುಳಿತಿರಬಹುದೆಂದು ಭಾವಿಸಿ ಅವರು ಮುಂದೆ ಸಾಗಿದ್ದರು. ನನ್ನ ಕಳವಳ ಮತ್ತಷ್ಟು ಹೆಚ್ಚಿತು. ನಿರ್ಜನ ಪ್ರದೇಶ! ಭಯಾನಕ ಏಕಾಂತತೆ! ನಾನು ಕಾಣೆಯಾಗಿರುವುದನ್ನು ತಿಳಿದು ಯಾರಾದರೂ ನನ್ನನ್ನು ಹುಡುಕಿಕೊಂಡು ಬರಬಹುದೆಂದು ಭಾವಿಸಿ ಅಲ್ಲಿಯೇ ಮುದುಡಿಕೊಂಡೆ. ಅನಿರೀಕ್ಷಿತವಾಗಿ ಸಫ್ವಾನ್ ಅಲ್ಲಿಗೆ ಬಂದರು. ಅವರು ನನ್ನನ್ನು ಗುರುತಿಸಿದರು. ನಮಗೆ ಪರಸ್ಪರ ಮುಖ ಪರಿಚಯವಿತ್ತು.

'ಇನ್ನಾಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿವೂನ್' ಎಂಬ ಅವರ ಮಾತುಗಳಿಂದ ನಾನು ಬೆಚ್ಚಿ ಬಿದ್ದೆ. ಅವರು ಒಂಟೆಯನ್ನು ನನ್ನ ಮುಂದೆ ಮೊಣಕಾಲೂರಿಸಿ ದೂರ ಸರಿದು ನಿಂತರು. ನಾನು ಅದರ ಮೇಲೇರಿದೆ. ಅವರು ಒಂಟೆಯನ್ನು ವೇಗವಾಗಿ ನಡೆಸಿದರು. ಬೇರೆ ಯಾರಾದರೂ ದೊರೆಯಬಹುದೆಂದು ಅವರು ನಿರೀಕ್ಷಿಸಿದ್ದರು. ಆದರೆ ದೌರ್ಭಾಗ್ಯವಶಾತ್ ಯಾರೂ ನಮಗೆ ಕಾಣಸಿಗಲಿಲ್ಲ. ಪ್ರಭಾತದ ವೇಳೆ ನಾವು ಸೇನೆಯ ಜತೆ ಸೇರಿದೆವು. ಆಗ ಎಲ್ಲರೂ ವಿಶ್ರಾಂತಿ ಪಡೆಯುತ್ತಿದ್ದರು. ಅಲ್ಲಾಹನಾಣೆ! ಇದಕ್ಕಿಂತ ಹೆಚ್ಚೇನೂ ನಡೆದಿಲ್ಲ. ಜನರ ಕುಪ್ರಚಾರದ ಬಗ್ಗೆ ನನಗೆ ಈಗಷ್ಟೇ ತಿಳಿಯಿತು. ಪ್ರವಾದಿವರ್ಯರ(ಸ) ವರ್ತನೆಯಲ್ಲಿ ಆಗಿರುವ ಬದಲಾವಣೆಯ ಕಾರಣವೂ ನನಗೆ ಅರ್ಥವಾಯಿತು.

ಇನ್ನೊಂದೆಡೆ ಪ್ರವಾದಿಯವರು(ಸ) ಏನು ಮಾಡುವುದೆಂದು ತಿಳಿಯದೇ ಪರಿತಪಿಸು ತ್ತಿದ್ದರು. ಕೊನೆಗೆ ಆ ಕುರಿತು ಅನುಚರರೊಡನೆ ಸಮಾಲೋಚಿಸಲು ನಿರ್ಧರಿಸಿದರು. ಆ ಪ್ರಕಾರ ಝೈದ್‌ರ ಪುತ್ರ ಉಸಾಮ(ರ) ಮತ್ತು ಅಲೀಯವರನ್ನು(ರ) ಕರೆಸಿ ಅವರ ಅಭಿಪ್ರಾಯ ಕೇಳಿದರು. ಉಸಾಮ(ರ) ಹೀಗೆಂದರು:

"ಅಲ್ಲಾಹನ ಪ್ರವಾದಿಗಳೇ! ನಿಮ್ಮ ಪತ್ನಿಯ ಕುರಿತು ಕೆಟ್ಟ ಮಾತುಗಳನ್ನು ನಾನೆಂದೂ ಕೇಳಿಲ್ಲ. ಇಂದು ನಾವು ಕೇಳುತ್ತಿರುವುದು ಅಸತ್ಯ ಮತ್ತು ಅಸಂಬದ್ಧ ವಾಗಿದೆ."

ಅಲೀ(ರ) ಹೀಗೆಂದರು:

"ಪ್ರವಾದಿಯವರೇ(ಸ), ಆಯಿಶಾರ ಸೇವಕಿ ಬರೀರಾರೊಡನೆ ಕೇಳಿ ನೋಡಿರಿ. ಅವರು ನಿಮಗೆ ಸತ್ಯವನ್ನು ತಿಳಿಸದಿರಲಾರರು" ಹಾಗೆಯೇ ಪ್ರವಾದಿಯವರು(ಸ) ಬರೀರಾರನ್ನು ಕರೆಸಿ ವಿಚಾರಿಸಿದರು. ಬರೀರಾ ಹೇಳಿದರು:

"ಅಲ್ಲಾಹನಾಣೆ, ಹಿತಕರವಾದುದಲ್ಲದೇ ಅವರ ಬಗ್ಗೆ ಬೇರೇನೂ ನನಗೆ ತಿಳಿದಿಲ್ಲ. ಈ ತನಕ ಅವರಲ್ಲಿ ನಾನು ಯಾವ ದೋಷವನ್ನೂ ಕಂಡಿಲ್ಲ. ಶುದ್ಧಮನಸ್ಕಳಾದ ಓರ್ವ ಹೆಣ್ಣು."

ಪ್ರವಾದಿಯವರ(ಸ) ಮಟ್ಟಿಗೆ ಅದು ಜೀವನದ ವಿಷಮ ಗಳಿಗೆಯಾಗಿತ್ತು. ಪ್ರಿಯ ಪತ್ನಿ ರೋಗ ಪೀಡಿತರಾಗಿದ್ದಾರೆ. ಒಂದೆಡೆ ಪತ್ನಿಯೊಂದಿಗಿನ ಪ್ರೇಮ ವಾತ್ಸಲ್ಯದ ಭಾವನೆಗಳು ಇನ್ನೊಂದೆಡೆ ಪ್ರಚುರಗೊಂಡಿರುವ ಅಪವಾದದ ರೋಷ. ಪ್ರವಾದಿ ಯವರು(ಸ) ಒಂದು ನಿರ್ಧಾರಕ್ಕೆ ಬರಲಾರದೇ ಉಭಯ ಸಂಕಟಕ್ಕೆ ಸಿಲುಕಿದ್ದರು. ಕೊನೆಗೆ ವಿವಾದದ ಕುರಿತು ಆಯಿಶಾರೊಂದಿಗೆ(ರ) ನೇರವಾಗಿ ಮಾತನಾಡಬೇಕೆಂದು ನಿರ್ಧರಿಸಿ ಅವರ ಮನೆಗೆ ಹೋದರು. ಅನಂತರ ಶಾಂತಸ್ವರದಲ್ಲಿ ಹೀಗೆಂದರು:

"ಪ್ರಿಯೆ, ಜನರು ಹೇಳುತ್ತಿರುವ ತಪ್ಪೇನಾದರೂ ಸಂಭವಿಸಿದ್ದರೆ ಅಲ್ಲಾಹನೊಡನೆ ಕ್ಷಮೆಯಾಚಿಸು. ಆತನು ತನ್ನ ದಾಸರ ಪಶ್ಚಾತ್ತಾಪವನ್ನು ಸ್ವೀಕರಿಸಿ ಕ್ಷಮೆ ನೀಡುತ್ತಾನೆ."

ಆಯಿಶಾರ(ರ) ಎರಡು ಕಣ್ಣುಗಳಲ್ಲಿಯೂ ನೀರು ತುಂಬಿ ಹರಿಯಿತು. ಅವರು ದೈನ್ಯದಿಂದ ತಂದೆ ತಾಯಿಗಳ ಮುಖವನ್ನು ನೋಡಿದರು.

"ನೀವೇಕೆ ಮೌನವಾಗಿದ್ದೀರಿ?" ಎಂದು ಕೇಳಿದರು.

ಅಬೂಬಕರ್(ರ) ಮತ್ತು ಝೈನಬ್‌ರ(ರ) ಕಣ್ಣುಗಳೂ ಹನಿಗೂಡಿದ್ದವು. ಮುಖ ಬಿಳಿಚಿತು. ತುಟಿಗಳು ನಡುಗಿದವು. ಗದ್ಗದ ಸ್ವರದಲ್ಲಿ 'ನಾವೇನು ಹೇಳಲಿ' ಎಂದು ತಮ್ಮ ಅಸಹಾಯಕತೆಯನ್ನು ತೋಡಿಕೊಂಡರು.

ಕೊನೆಗೆ ಆಯಿಶಾ(ರ) ಸ್ವತಃ ತಮ್ಮ ಧೋರಣೆಯನ್ನು ಸ್ಪಷ್ಟಪಡಿಸಿದರು:

"ಸರ್ವೋನ್ನತನಾದ ಅಲ್ಲಾಹನು ಎಲ್ಲವನ್ನೂ ಬಲ್ಲವನಾಗಿದ್ದಾನೆ. ಕ್ಷಮೆ ಕೇಳುವಂತಹ ಯಾವ ತಪ್ಪನ್ನೂ ನಾನು ಮಾಡಿಲ್ಲ. ಜನರ ಮಾತನ್ನು ನಿರಾಕರಿಸಿದರೂ ಅವರು ನನ್ನನ್ನು ನಂಬಲಾರರು. ಆದ್ದರಿಂದ ಪ್ರವಾದಿ ಯೂಸುಫ್‌ರ ತಂದೆ ಹೇಳಿ ದಂತೆ 'ಉತ್ತಮ ತಾಳ್ಮೆ' ವಹಿಸುವುದರ ವಿನಾ ಬೇರೇನೂ ನನಗೆ ಹೇಳಲಿಕ್ಕಿಲ್ಲ. ನಾನು ಅಲ್ಲಾಹನ ಅಭಯ ಯಾಚಿಸುತ್ತೇನೆ." ಆಯಿಶಾರಿಗೆ(ರ) ಅಳು ತಡೆಯಲಾಗಲಿಲ್ಲ.

ಪ್ರವಾದಿವರ್ಯರು(ಸ) ವ್ಯಾಕುಲರಾಗಿ ಅವರನ್ನು ನೋಡಿದರು. ದೇಹವು ಬಲವಾಗಿ ಕಂಪಿಸತೊಡಗಿತು. ಹಣೆಯಲ್ಲಿ ಬೆವರು ಮೂಡಿತು. ಅದು ದಿವ್ಯ ಸಂದೇಶ ಅವತೀರ್ಣವಾಗುವುದರ ಸೂಚನೆಯಾಗಿತ್ತು.

ಕೆಲವು ನಿಮಿಷಗಳ ಬಳಿಕ ಪ್ರವಾದಿಯವರು(ಸ) ಆಯಿಶಾರತ್ತ(ರ) ನೋಡಿದರು. ಸಂತೋಷದಿಂದ ಮುಗುಳ್ನಗುತ್ತಾ ಹೀಗೆಂದರು:

"ಆಯಿಶಾ, ನೀನು ಸಂತೋಷಪಡು. ಘಟನೆಯ ವಾಸ್ತವಿಕತೆ ಸ್ಪಷ್ಟವಾಗಿದೆ. ಅಲ್ಲಾಹನು ನಿನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿದ್ದಾನೆ." ತರುವಾಯ ಅವರು ಆಗ ತಾನೇ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ವಾಕ್ಯಗಳನ್ನು ಓದಿ ಹೇಳಿದರು:

"ನಿಶ್ಚಯವಾಗಿಯೂ ನಿಮ್ಮ ಕೂಟದಲ್ಲಿರುವವರೇ ಆ ಸುಳ್ಳು ಸುದ್ದಿಯನ್ನು ಸೃಷ್ಟಿಸಿದ್ದಾರೆ. ಅದು ನಿಮಗೆ ಹಾನಿಕರವೆಂದು ಭಾವಿಸಬೇಡಿರಿ. ವಸ್ತುತಃ ಅದು ನಿಮಗೆ ಲಾಭದಾಯಕವಾಗಿದೆ. ಅವರಲ್ಲಿ ಪ್ರತಿಯೊಬ್ಬರಿಗೂ ಅವರು ಸಂಪಾದಿಸಿದ್ದಷ್ಟು ಪಾಪವಿದೆ. ಅವರ ಪೈಕಿ ಪ್ರಮುಖ ಪಾತ್ರ ವಹಿಸಿದವನಿಗೆ ಕಠಿಣ ಶಿಕ್ಷೆಯಿದೆ. ನೀವು ಅದನ್ನು ಕೇಳಿದಾಗ, ಸತ್ಯವಿಶ್ವಾಸಿಗಳು ಮತ್ತು ಸತ್ಯವಿಶ್ವಾಸಿನಿಯರಾದ ಮಂದಿ ತಮ್ಮವರ ಕುರಿತು ಸದಭಿಪ್ರಾಯವಿರಿಸಿ ಅದೊಂದು ಸ್ಪಷ್ಟ ಸುಳ್ಳಾರೋಪವೆಂದು ಯಾಕೆ ಹೇಳಲಿಲ್ಲ? ಆ ಬಗ್ಗೆ ಅವರು ನಾಲ್ಕು ಸಾಕ್ಷಿಗಳನ್ನು ಯಾಕೆ ಹಾಜರುಪಡಿಸಲಿಲ್ಲ. ಆದ್ದರಿಂದ ಅವರು ಅಲ್ಲಾಹನ ದೃಷ್ಟಿಯಲ್ಲಿ ಸುಳ್ಳುಗಾರರಾಗಿದ್ದಾರೆ. ಇಹ-ಪರಲೋಕಗಳಲ್ಲಿ ನಿಮ್ಮ ಮೇಲೆ ಅಲ್ಲಾಹನ ಔದಾರ್ಯ ಮತ್ತು ಕರುಣೆಯಿಲ್ಲದಿರುತ್ತಿದ್ದರೆ ನೀವು ಕುಪ್ರಚಾರ ನಡೆಸಿದ್ದಕ್ಕಾಗಿ ಭಯಾನಕ ಶಿಕ್ಷೆ ನಿಮ್ಮನ್ನು ಆವರಿಸುತ್ತಿತ್ತು. ನೀವು ನಾಲಗೆಯಿಂದ ಅದನ್ನು ಹೇಳುತ್ತಿರುವಾಗ, ನಿಮಗರಿವಿಲ್ಲದ ವಿಷಯವನ್ನು ಬಾಯಲ್ಲಿ ಕೇಳುತ್ತಿರುವಾಗ, ನೀವು ಅದನ್ನೊಂದು ಕ್ಷುಲ್ಲಕ ವಿಚಾರವೆಂದು ಭಾವಿಸಿದಿರಿ. ಆದರೆ ಅಲ್ಲಾಹನ ಮಟ್ಟಿಗೆ ಅದೊಂದು ಘೋರ ವಿಷಯವಾಗಿದೆ. ಅದನ್ನು ಕೇಳಿಸಿದಾಗ ಅಂತಹ ಮಾತು ನನಗೆ ಹೇಳಿಸಿದ್ದಲ್ಲ. 'ಸುಬ್‌ಹಾನಲ್ಲಾಹ್'(ಅವನು ಪರಿಶುದ್ಧನು) ಇದೊಂದು ಮಹಾ ಸುಳ್ಳಾರೋಪವೆಂದು ನೀವು ಯಾಕೆ ಹೇಳಲಿಲ್ಲ.?

"ನೀವು ಸತ್ಯವಿಶ್ವಾಸಿಗಳಾಗಿದ್ದರೆ ಮುಂದೆ ಎಂದೂ ಇಂತಹ ತಪ್ಪುಗಳನ್ನು ಆವರ್ತಿಸ ಬಾರದೆಂದು ಅಲ್ಲಾಹನು ನಿಮಗೆ ಉಪದೇಶವೀಯುತ್ತಾನೆ."

(ಪವಿತ್ರ ಕುರ್‌ಆನ್, 24:11-17)

"ಆಯಿಶಾ! ಎದ್ದು ನಿಂತು ಪ್ರವಾದಿಯವರಿಗೆ(ಸ) ಕೃತಜ್ಞತೆ ಹೇಳು!" ಝೈನಬ್ ವಿನಂತಿಸಿದರು.

"ನಾನು ಅವರಿಗೆ ಅಥವಾ ನಿಮಗೆ ಕೃತಜ್ಞತೆ ಹೇಳಬೇಕಾಗಿಲ್ಲ, ನನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಿದ ಅಲ್ಲಾಹನಿಗೆ ಹೇಳಬೇಕಾಗಿದೆ" ಎಂದು ಆಯಿಶಾ(ರ) ಉತ್ತರಿಸಿದರು.

---

# ಅವಿಸ್ಮರಣೀಯ ಭೇಟಿ

"ನಾನು ಪ್ರವಾದಿಯವರ(ಸ) ಸಹೋದರಿ. ನನಗೆ ಅವರನ್ನು ಕಣ್ಣಾರೆ ನೋಡಬೇಕಾಗಿದೆ." ಸ್ವಲ್ಪ ವಯಸ್ಸಾದಂತೆ ತೋರುವ ಓರ್ವ ಮಹಿಳೆಯು ಪ್ರವಾದಿಯವರ(ಸ) ಸಂಗಾತಿಗಳೊಂದಿಗೆ ಹೇಳಿದರು. ಆದರೆ ಅವರಿಗೆ ಆ ಮಾತನ್ನು ನಂಬಲಾಗಲಿಲ್ಲ. ಪ್ರವಾದಿ ಮುಹಮ್ಮದ್‌ರು(ಸ) ಅಬ್ದುಲ್ಲಾ ಮತ್ತು ಆಮಿನಾರ ಏಕ ಸಂತಾನವೆಂದು ಅವರಿಗೆ ತಿಳಿದಿತ್ತು. ಅವರಿಗೆ ಸಹೋದರ ಅಥವಾ ಸಹೋದರಿಯಿಲ್ಲ. ಆದ್ದರಿಂದ ಅವರು ಆ ವೃದ್ಧೆಯನ್ನು ನೋಡಿ ನಕ್ಕರು. ಅವರಿಗೆ ಬುದ್ಧಿ ಸರಿಯಿಲ್ಲವೆಂದು ಭಾವಿಸಿದರು.

ಆದರೆ ವೃದ್ಧೆಯ ಮನಸ್ಸು ಬಾಲ್ಯಕಾಲ ಸ್ಮರಣೆಗಳಿಂದ ತುಂಬಿತ್ತು. ಹಲವು ವರ್ಷಗಳ ಹಿಂದೆ ತನ್ನ ಪುಟ್ಟ ತಮ್ಮನನ್ನು ತನ್ನ ಬಳಿ ಬಿಟ್ಟು ತಾಯಿಯು ಮಕ್ಕಾಕ್ಕೆ ಹೋದ ಘಟನೆಯನ್ನು ಅವರು ಜ್ಞಾಪಿಸಿದರು. ಪಯಣಕ್ಕೆ ಹೊರಟಾಗ ಬೇಗ ಮರಳಿರೆಂದು ತಾಯಿಯೊಂದಿಗೆ ಹೇಳಿದ ಸಂದರ್ಭವನ್ನು ಅವರು ಮರೆತಿರಲಿಲ್ಲ. ಆದರೆ ಅಂದು ತಾಯಿಯವರು ನಿರೀಕ್ಷೆಗಿಂತ ಸ್ವಲ್ಪ ತಡವಾಗಿಯೇ ಮಕ್ಕಾದಿಂದ ಮರಳಿದ್ದರು. ಏಕೆಂದರೆ ಅವರಿಗೆ ಎಷ್ಟು ಸುತ್ತಾಡಿದರೂ ಮೊಲೆಯೂಡಿಸುವುದಕ್ಕೆ ಮಗು ದೊರೆತಿರಲಿಲ್ಲ. ಎಲ್ಲರೂ ಶ್ರೀಮಂತರ ಮತ್ತು ಗಣ್ಯ ಕುಟುಂಬದ ಮಕ್ಕಳಿಗಾಗಿಯೇ ಹುಟುಕಾಟ ನಡೆಸುತ್ತಿದ್ದರು. ಕೊನೆಗೆ ಆಮಿನಾ ಎಂಬೋರ್ವ ಮಹಿಳೆಯ ಬಳಿ ಮುಹಮ್ಮದ್ ಎಂಬ ಮಗುವಿದೆಯೆಂದು ಹಲೀಮರಿಗೆ ತಿಳಿಯಿತು. ಆದರೆ ಆ ಅನಾಥ ಮಗುವನ್ನು ಸ್ವೀಕರಿಸಲು ಇತರ ಮಹಿಳೆಯರಂತೆಯೇ ಹಲೀಮರಿಗೂ ಮನಸ್ಸಿರಲಿಲ್ಲ. ಅನಾಥ ಮಕ್ಕಳಿಗೆ ಮೊಲೆಯೂಡಿಸಿದರೆ ಸಾಕಷ್ಟು ಪ್ರತಿಫಲ, ಉಡುಗೊರೆ ದೊರೆಯುವುದಿಲ್ಲವೆಂಬುದೇ ಅದಕ್ಕೆ ಕಾರಣವಾಗಿತ್ತು.

ಇತರ ಮಕ್ಕಳು ದೊರೆಯದಿರುವುದರಿಂದ ಹಲೀಮಾರು ಆಮಿನಾರ ಮಗುವನ್ನೇ ಮೊಲೆಯುಣಿಸಲಿಕ್ಕಾಗಿ ಸ್ವೀಕರಿಸಿದರು. ಪತಿ ಹಾರಿಸ್‌ಗೆ ಮುಹಮ್ಮದ್‌ರ ಅನಾಥತ್ವ

ಮತ್ತು ಬಡತನದ ಬಗ್ಗೆ ತಿಳಿಸಿದರು. ಮಗುವಿನ ಆಕರ್ಷಕ ಹಾವಭಾವ ಮತ್ತು ಬೇರೆ ಮಗು ದೊರೆಯದೇ ಬರಿಗೈಯಲ್ಲಿ ಹಿಂತಿರುಗಬೇಕಾದ ಮುಜುಗರವನ್ನು ನೆನೆಸಿ ಅವರು ಆಮಿನಾರಿಂದ ಮಗುವನ್ನು ಸ್ವೀಕರಿಸಿದರು.

ಮಗುವನ್ನು ಎತ್ತಿಕೊಂಡ ಹಲೀಮರು ಮಾತೃಸಹಜ ಪ್ರೀತಿಯಿಂದ ಮಗುವಿನ ತಲೆ ಮತ್ತು ಮುಖವನ್ನು ಮುದ್ದಿಸಿದರು. ಪ್ರೀತಿಯಿಂದ ಎದೆಗಪ್ಪಿಕೊಂಡರು. ತರುವಾಯ ಪ್ರವಾಸಿ ತಂಡದೊಂದಿಗೆ ಸೇರಿ ಮಕ್ಕಾದಿಂದ ಮರಳಿದರು.

ಶೈಮಾಲ್, ಪುಟ್ಟ ತಮ್ಮನನ್ನು ಲಾಲಿಸುತ್ತಾ ತಾಯಿಯ ಆಗಮನವನ್ನೇ ನಿರೀಕ್ಷಿಸುತ್ತಿದ್ದಳು. ತಾಯಿಯ ಜತೆ ಮಗುವನ್ನು ನೋಡಿ ಸಂತೋಷದಿಂದ ಕುಣಿದಾಡಿದಳು. ಮಗುವಿನ ತಂದೆತಾಯಿಗಳಿಂದ ದೊರೆಯಲಿರುವ ಉಡುಗೊರೆಯು ಆಕೆಯ ಸಂತೋಷಕ್ಕೆ ಕಾರಣವಾಗಿತ್ತು. ಮಗು ಅನಾಥವೆಂದು ತಿಳಿದಾಗ ಮನಸ್ಸು ಸ್ವಲ್ಪ ಮುದುಡಿತು. ಆದರೂ ಮಗುವಿನ ತುಂಟಾಟ ಮತ್ತು ಆಕರ್ಷಕ ಹಾವಭಾವವು ಆಕೆಯನ್ನು ಪುಳಕಿತಗೊಳಿಸಿತು.

ಮುಹಮ್ಮದ್‌ರೊಂದಿಗೆ(ಸ) ಒಡನಾಡಿದ ದಿನಗಳನ್ನು ಶೈಮಾಲ್ ಸ್ಮರಿಸಿದರು. ಆಕೆಯ ಮನದಾಳದಲ್ಲಿ ಅವು ಭದ್ರವಾಗಿದ್ದವು. ಮನೆಯ ಅಂಗಣದಲ್ಲಿ ಓಡಾಡಿದ್ದು, ಕಣಿವೆಗಳ ದೃಶ್ಯವನ್ನು ನೋಡಲು ಹೋದದ್ದು. ಜತೆಯಾಗಿ ಆಡು ಮೇಯಿಸಿದ್ದು, ಮುಹಮ್ಮದ್‌ರ ಆಗಮನದಿಂದ ಮನೆಯಲ್ಲಿ ಸಮೃದ್ಧಿಯಾದದ್ದು, ಬೆಳೆ ಹೆಚ್ಚಿದ್ದು, ಆಡುಗಳಿಂದ ಅಧಿಕ ಹಾಲು ದೊರೆತದ್ದು ಇತ್ಯಾದಿ ಮನೆಯವರು ಹೇಳುತ್ತಿದ್ದ ಎಲ್ಲ ವಿಷಯಗಳನ್ನು ಅವರು ಜ್ಞಾಪಿಸಿದರು. ಮುಹಮ್ಮದ್‌ರಿಗೆ(ಸ) ನಾಲ್ಕು ವರ್ಷವಾದಾಗ ತಾಯಿಯು ಅವರನ್ನು ಮರಳಿಸಲು ಕರೆದೊಯ್ದ ದೃಶ್ಯವನ್ನು ಶೈಮಾಲ್‌ರಿಗೆ ಮರೆಯಲಾಗುತ್ತಿರಲಿಲ್ಲ. ಅಂದು ಆಕೆ ತುಂಬಾ ರೋದಿಸಿದ್ದಳು. ಆಹಾರ ಸೇವಿಸಲೊಪ್ಪಲಿಲ್ಲ. ಆ ಅಗಲಿಕೆಯು ಅಷ್ಟೊಂದು ವಿಷಾದನೀಯವಾಗಿತ್ತು. ಆ ಬಳಿಕ ಅವರು ಪ್ರವಾದಿ ವರ್ಯರನ್ನು(ಸ) ನೋಡಿರಲಿಲ್ಲ. ಆದರೂ ಅವರ ಬಗ್ಗೆ ಮಾತನಾಡುವುದನ್ನು ಕೇಳಿದ್ದಳು. ಆರನೆಯ ವಯಸ್ಸಿನಲ್ಲಿಯೇ ಆಮಿನಾ ಮರಣಹೊಂದಿದ್ದು, ತರುವಾಯ ಪಿತಾಮಹ ಅಬ್ದುಲ್ ಮುತ್ತಲಿಬ್ ನಿಧನರಾದದ್ದು, ಚಿಕ್ಕಪ್ಪ ಅಬೂತಾಲಿಬ್‌ರ ಪೋಷಣೆಯಲ್ಲಿ ಬೆಳೆದದ್ದು, ಖದೀಜಾರನ್ನು ವಿವಾಹವಾದದ್ದು, ಪ್ರವಾದಿತ್ವ ದೊರೆತದ್ದು, ಸಂಗಾತಿಗಳನ್ನು ಕ್ರೂರವಾಗಿ ಮರ್ದಿಸಿದ್ದು, ತರುವಾಯ ಊರು-ಮನೆ ತೊರೆದು ಮದೀನಾಕ್ಕೆ ಬಂದದ್ದು, ಈ ಎಲ್ಲ ವೃತ್ತಾಂತವನ್ನು ಶೈಮಾಲ್ ಅರಿತಿದ್ದರು. ಸುದೀರ್ಘ ಕಾಲ ಮದೀನಾದಲ್ಲಿ ವಾಸಿಸಿದ ಬಳಿಕ ಜಯಶಾಲಿಯಾಗಿ ಮಕ್ಕಾಕ್ಕೆ ಮರಳಿದ ಹಾಗೂ ವೈರಿಗಳು ಸೋತು ಹಿಂದೆ ಸರಿದ ಸಮಾಚಾರವನ್ನೂ ಅವರು ಕೇಳಿ ತಿಳಿದಿದ್ದರು.

ಮಕ್ಕಾ ವಿಜಯದ ಬಳಿಕ ಪ್ರವಾದಿ(ಸ) ಮತ್ತು ಅನುಚರರು ಮಕ್ಕಾದಲ್ಲಿ ಕೆಲವಾರು ದಿನ ಸಂತೋಷದಿಂದ ಉಳಿದುಕೊಂಡರು. ಆ ವೇಳೆ ಹವಾಝಿನ್ ಸಖೀಫ್ ಗೋತ್ರಗಳು ತಮ್ಮ ವಿರುದ್ಧ ಯುದ್ಧಕ್ಕೆ ಹೊರಟಿರುವರೆಂಬ ಸುದ್ದಿ ಅವರಿಗೆ ಮುಟ್ಟಿತು.

ಪ್ರವಾದಿಯವರಿಗೆ(ಸ) ಮೊಲೆಯೂಡಿಸಿದ ಬನೂ ಸಅದ್ ಗೋತ್ರದವರೂ ಜೊತೆಗೂಡಿದ್ದರು. ಮಾಲಿಕ್ ಬಿನ್ ಔಫ್ ಅವರ ನಾಯಕರಾಗಿದ್ದರು. ಅವರು ಮಹಿಳೆಯರು ಮತ್ತು ಮಕ್ಕಳನ್ನು ಯುದ್ಧ ರಂಗಕ್ಕೆ ಕರೆ ತಂದಿದ್ದರು. ಕೊನೆಗೆ ಹುನೈನ್‌ನಲ್ಲಿ ತೀವ್ರ ಕಾದಾಟ ನಡೆಯಿತು. ಆರಂಭ ಹಂತದಲ್ಲಿ ಪ್ರವಾದಿ ಮತ್ತು ಅನುಚರರಿಗೆ ಸೋಲುಂಟಾದರೂ ಕೊನೆಗೆ ಪ್ರತಿ ಹೋರಾಟ ನಡೆಸಿ ಅವರು ಗೆದ್ದರು.

ವೈರಿ ಗೋತ್ರಗಳ ಅನೇಕ ಮಹಿಳೆಯರು ಮತ್ತು ಮಕ್ಕಳನ್ನು ಮುಸ್ಲಿಮರು ಬಂಧಿಸಿದರು. ಶೈಮಾಅ್ ಕೂಡಾ ಆ ಕೂಟದಲ್ಲಿದ್ದರು. ಮುಸ್ಲಿಮರ ಸದ್ವರ್ತನೆಯನ್ನು ನೋಡಿ ಹವಾಝಿನ್ ಗೋತ್ರದ ಎಲ್ಲರೂ ಇಸ್ಲಾಮ್ ಧರ್ಮವನ್ನು ಸ್ವೀಕರಿಸಲು ಸಿದ್ಧರಾದರು. ಅದಕ್ಕಾಗಿ ಪ್ರವಾದಿಯವರ(ಸ) ಬಳಿಗೆ ಹೋಗುತ್ತಿದ್ದ ವೇಳೆ ಶೈಮಾಅ್ ತಾನು ಮುಹಮ್ಮದ್‌ರ(ಸ) ಸೋದರಿಯೆಂಬ ವಿಷಯವನ್ನು ಹೊರಗೆಡಹಿದ್ದರು. ಪ್ರವಾದಿಯವರ(ಸ) ಸಂಗಾತಿಗಳಿಗೆ ಅದೊಂದು ತಮಾಷೆಯಾಗಿ ಕಾಣಿಸಿತು. ಆದರೂ ಅವರು ಪ್ರವಾದಿಯವರಿಗೆ(ಸ) ಸುದ್ದಿ ಮುಟ್ಟಿಸಿದರು. ಪ್ರವಾದಿಯವರು(ಸ) ಅವರನ್ನು ತನ್ನ ಬಳಿಗೆ ಕರೆತರುವಂತೆ ತಿಳಿಸಿದರು. ಪ್ರವಾದಿಯವರಿಗೆ(ಸ) ತಟ್ಟನೆ ಗುರುತಿಸಲಾಗಲಿಲ್ಲ. ಚಿಕ್ಕಂದಿನಲ್ಲಿ ತನ್ನ ಮೈಯನ್ನು ಪರಚಿದ ಗಾಯದ ಕಲೆಯನ್ನು ತೋರಿಸಿದಾಗ ಅವರು ಧಿಗ್ಗನೆದ್ದು ಶೈಮಾಅ್‌ರನ್ನು ಆಲಂಗಿಸಿಕೊಂಡರು. ಅವರ ಕಣ್ಣುಗಳಿಂದ ನೀರು ಒಸರಿತು. ಅವರು ಆಕೆಯನ್ನು ತನ್ನ ಬಳಿ ಕುಳ್ಳಿರಿಸಿದರು. ಈ ಅನಿರೀಕ್ಷಿತ ಭೇಟಿಯಿಂದ ಪ್ರವಾದಿಯವರು(ಸ) ಆನಂದ ತುಂದಿಲರಾದರು. ಅನಾಥ ನಾಗಿದ್ದ ತನ್ನನ್ನು ಬೆಳೆಸಿದ ಹಲೀಮ, ನೆರಳಿನಂತೆ ಹಿಂಬಾಲಿಸುತ್ತಿದ್ದ ಶೈಮಾಅ್, ಹಳ್ಳಿಯ ಶುದ್ಧ ವಾತಾವರಣ ಇತ್ಯಾದಿಗಳೆಲ್ಲವನ್ನೂ ಅವರು ಜ್ಞಾಪಿಸಿದರು. ಆ ಪ್ರೀತಿ ಭರಿತ ದಿನಗಳನ್ನು ನೆನೆಸಿ ಅವರು ತುಂಬಾ ಹೊತ್ತು ಮೌನವಾಗಿ ಕುಳಿತರು. ಸಹೋದರಿಯನ್ನು ಪ್ರೀತ್ಯಾದರಗಳಿಂದ ಸಂತುಷ್ಟಗೊಳಿಸಿದರು. ಇನ್ನುಳಿದ ಕಾಲ ತನ್ನ ಜತೆ ವಾಸವಾಗಿರುವಂತೆ ತಿಳಿಸಿದರು.

ಶೈಮಾಅ್‌ರಿಗೆ ಪ್ರವಾದಿಯವರ(ಸ) ಜೊತೆಗಿರಲು ಮನಸ್ಸಿದ್ದರೂ ಕುಟುಂಬ ಮತ್ತು ಊರಿನವರ ಸ್ಮರಣೆಯು ಅದಕ್ಕೆ ಅಡ್ಡಿಯಾಯಿತು. ಆದ್ದರಿಂದ ಅವರು ಊರಿಗೆ ಹೋಗಲು ಅನುಮತಿ ಕೇಳಿದರು. ಪ್ರವಾದಿಯವರು(ಸ) ಅರೆ ಮನಸ್ಸಿನಿಂದ ಅದಕ್ಕೆ ಒಪ್ಪಿದರು. ಹಾಗೆ ಶೈಮಾಅ್ ಮತ್ತು ಬಳಗದವರು ಹೊರಟು ಹೋಗುವಾಗ ಪ್ರವಾದಿಯವರು(ಸ) ಅವರಿಗೆ ಅನೇಕ ಉಡುಗೊರೆಗಳನ್ನೂ, ಅವಶ್ಯಕ ವಸ್ತುಗಳನ್ನೂ ನೀಡಿದರು. ಯಾತ್ರಾ ತಂಡವು ಕಣ್ಮರೆಯಾಗುವ ತನಕ ಪ್ರವಾದಿಯವರು(ಸ) ಹನಿಗೂಡಿದ ಕಣ್ಣುಗಳಿಂದ ಸಹೋದರಿಯನ್ನು ನೋಡುತ್ತಾ ನಿಂತಿದ್ದರು.

---

# ವಯೋವೃದ್ಧೆಯ ಮನೋಸ್ಥೈರ್ಯ

"ಪ್ರೀತಿಯ ಮಕ್ಕಳೇ ನೀವು ಸ್ವಂತ ಇಚ್ಛೆಯಿಂದ ಸನ್ಮಾರ್ಗವನ್ನು ಸ್ವೀಕರಿಸಿದ್ದೀರಿ. ಸಂಪೂರ್ಣ ಸಂತೃಪ್ತಿಯಿಂದ ಸ್ವದೇಶವನ್ನು ತೊರೆದು ಬಂದಿದ್ದೀರಿ. ಸತ್ಯ ಮಾರ್ಗದಲ್ಲಿ ಹೋರಾಡುವವರಿಗೆ ಅಲ್ಲಾಹನು ನೀಡಿರುವ ಮಹಾ ಅನುಗ್ರಹಗಳ ವಾಗ್ದಾನವನ್ನು ನೀವು ಬಲ್ಲಿರಿ. ಶಾಶ್ವತ ಸೌಭಾಗ್ಯ ದೊರೆಯುವ ಪರಲೋಕದ ಯಶಸ್ಸಿಗೆ ಹೋಲಿಸಿದಾಗ ಐಹಿಕ ಜೀವನವು ತೀರಾ ತುಚ್ಛವಾಗಿದೆ. ಮುದ್ದು ಮಕ್ಕಳೇ! ನಾಳೆ ಯುದ್ಧವು ಬಿರುಸುಗೊಂಡು ರಣರಂಗವು ಹೊತ್ತಿ ಉರಿಯುವಾಗ ನೀವು ಶತ್ರು ಪಂಕ್ತಿಗಳನ್ನು ಭೇದಿಸಿ ಮುನ್ನುಗ್ಗಬೇಕು. ಅಸತ್ಯದ ವಿರುದ್ಧ ಧೀರವಾಗಿ ಹೋರಾಡಬೇಕು. ಸಹಾಯ ಮತ್ತು ವಿಜಯಕ್ಕಾಗಿ ಅಲ್ಲಾಹನೊಡನೆ ಪ್ರಾರ್ಥಿಸಬೇಕು. ದೇವೇಚ್ಛೆಯಿದ್ದರೆ ಪರಲೋಕದಲ್ಲಿ ಉನ್ನತ ಸ್ಥಾನ ಲಭಿಸುವುದು. ಯುದ್ಧದಲ್ಲಿ ಜಯವನ್ನೂ ಗಳಿಸಬಹುದು."

ಖನ್ಸಾ(ರ) ತನ್ನ ನಾಲ್ವರು ಪುತ್ರರನ್ನು ಯುದ್ಧರಂಗಕ್ಕೆ ಕಳುಹಿಸಿದರು. ಯುದ್ಧ ರಂಗಕ್ಕೆ ಹೊರಟ ಪುತ್ರರಿಗೆ ತಾಯಿಯ ಮಾತುಗಳು ಮನಸ್ಸಿಗೆ ಸಮಾಧಾನ ನೀಡಿತು.

ಜನರ ತ್ಯಾಗ ಮನೋಭಾವವನ್ನು ಸ್ವಂತ ಹಿತಾಸಕ್ತಿಗಳಿಗಿಂತ ಹೆಚ್ಚಾಗಿ ಆಪ್ತ ಬಂಧು ಮಿತ್ರರ ಬಗೆಗಿನ ಕಾಳಜಿಯು ಅಧೀರಗೊಳಿಸುತ್ತದೆ. ಆದರ್ಶಕ್ಕಾಗಿ ಆತ್ಮಾರ್ಪಣೆಗೆ ಹೊರಡುವವರನ್ನು ತಂದೆ-ತಾಯಿಗಳ ಮತ್ತು ಸತಿ-ಸುತರ ನೆನಪು ಹಿಂದಕ್ಕೆ ಸೆಳೆಯುತ್ತದೆ. ಅವರು ಪ್ರೇರಣೆ-ಪ್ರೋತ್ಸಾಹ ನೀಡಿ ಕಳುಹಿಸಿ ಕೊಟ್ಟರೆ ಮಾನವನು ಏನು ಬೇಕಾದರೂ ಮಾಡಲು ಸಿದ್ಧನಾಗುತ್ತಾನೆ. ಈ ವಿಷಯವನ್ನು ಚೆನ್ನಾಗಿ ತಿಳಿದಿದ್ದ ಖನ್ಸಾ(ರ) ತನ್ನ ನಾಲ್ವರು ಪುತ್ರರನ್ನು ಸಂತೋಷದಿಂದ ಕಳುಹಿಸಿದರು. ಆ ವೃದ್ಧೆ ತಾಯಿಗೆ ಅವರಲ್ಲಿ ಪ್ರೀತಿಯಿತ್ತು. ಆದರೆ ಸೃಷ್ಟಿಗಳಾದ ಮಕ್ಕಳಿಗಿಂತ ಸೃಷ್ಟಿಕರ್ತನಾದ ಅಲ್ಲಾಹನನ್ನು ಅವರು ಅಧಿಕ ಪ್ರೀತಿಸುತ್ತಿದ್ದರು. ಎಂದಾದರೊಮ್ಮೆ ಮಕ್ಕಳಿಗೆ ವಿದಾಯ ಕೋರಲೇ ಬೇಕಾಗಿದೆಯೆಂದು ಅವರಿಗೆ ತಿಳಿದಿತ್ತು. ಅನಂತರ ಪರಲೋಕದಲ್ಲಿ ಸಂತೋಷದಿಂದ ಭೇಟಿಯಾಗುವ ಪರಿಸ್ಥಿತಿಯು ಈ ವಿದಾಯಕ್ಕಿಂತ ಉತ್ತಮವೆಂದು ಅವರು ಮನಗಂಡಿದ್ದರು.

ಖನ್ಸಾರ(ರ) ನಾಲ್ವರು ಪುತ್ರರು ಕಾದಿಸಿಯ್ಯದಲ್ಲಿ ಪರ್ಶಿಯನ್ ಯೋಧರೊಂದಿಗೆ ಕಾದಾಡಿದರು. ಅದು ಉಮರುಲ್ ಫಾರೂಕ್‌ರ ಆಡಳಿತ ಕಾಲದಲ್ಲಿ ಇಸ್ಲಾಮೀ ರಾಷ್ಟ್ರದ ವಿರುದ್ಧ ಪರ್ಶಿಯನ್ ಸಾಮ್ರಾಜ್ಯವು ಹೂಡಿದ ನಿರ್ಣಾಯಕ ಹೋರಾಟವಾಗಿತ್ತು.

ಸಅದ್ ಬಿನ್ ಅಬೀ ವಕ್ಕಾಸ್‌ರ ನಾಯಕತ್ವದಲ್ಲಿ ಮುಸ್ಲಿಮರು ವೀರಾವೇಶದಿಂದ ಹೋರಾಡಿದರು. ಈ ಇತಿಹಾಸ ಪ್ರಸಿದ್ಧ ಯುದ್ಧದಲ್ಲಿ ಖನ್ಸಾರ(ರ) ನಾಲ್ವರು ಪುತ್ರರೂ ಹುತಾತ್ಮರಾದರು. ತಮ್ಮ ಮಕ್ಕಳು ಹುತಾತ್ಮರಾದ ಸುದ್ದಿಯನ್ನು ಕೇಳಿ ಅವರು ಹೀಗೆ ಉದ್ಗರಿಸಿದರು: "ಅಲ್ಲಾಹನಿಗೆ ಸರ್ವಸ್ತುತಿ. ಆತನು ತನ್ನ ಮಕ್ಕಳಿಗೆ ಹುತಾತ್ಮರಾಗುವ ಸೌಭಾಗ್ಯ ನೀಡಿ ಅನುಗ್ರಹಿಸಿದ್ದಾನೆ. ನಾಳೆ ಆತನ ದಿವ್ಯ ಕರುಣೆಯ ನೆರಳಲ್ಲಿ ನನ್ನ ಮಕ್ಕಳನ್ನು ಭೇಟಿಯಾಗಲು ನೆರವಾಗಲಿ."

ವೃದ್ಧಾಪ್ಯದಿಂದ ಬಳಲುತ್ತಿದ್ದರೂ ನಾಲ್ವರು ಪುತ್ರರ ಮರಣದಿಂದ ಅವರು ವಿಚಲಿತರಾಗಲಿಲ್ಲ. ಅದೇ ಖನ್ಸಾ(ರ) ಹಲವಾರು ವರ್ಷಗಳ ಹಿಂದೆ ತಮ್ಮ ಸಹೋದರರ ಮರಣಕ್ಕಾಗಿ ದುಃಖದಿಂದ ಎದೆ ಬಡಿದು ರೋದಿಸಿದ್ದರು. ಅಂದು ಅವರು ಇಸ್ಲಾಮ್ ಸ್ವೀಕರಿಸಿರಲಿಲ್ಲ. ಸಹೋದರರರೂ ಮುಸ್ಲಿಮರಾಗಿರಲಿಲ್ಲ. ತಂದೆಯ ನಿಧನದ ನಂತರ, ಸಹೋದರರಾದ ಮುಆವಿಯಾ ಮತ್ತು ಸಖ್ರ್ ಅವರ ಆಶ್ರಯದಾತರಾಗಿದ್ದರು. ಅವರ ಅಸಾಮಾನ್ಯ ಧೈರ್ಯ ಮತ್ತು ಔದಾರ್ಯವೇ ಅದಕ್ಕೆ ಕಾರಣವಾಗಿತ್ತು.

ಪ್ರವಾದಿವರ್ಯರ(ಸ) ಆಗಮನಕ್ಕಿಂತ ಮುಂಚೆ ಅರಬ್ ಸಮಾಜದಲ್ಲಿ ಯುದ್ಧ-ಸಂಘರ್ಷಗಳು ಸರ್ವ ಸಾಮಾನ್ಯವಾಗಿತ್ತು. ಅಂತಹ ಒಂದು ಯುದ್ಧದಲ್ಲಿ ಖನ್ಸಾರ(ರ) ಹಿರಿಯ ಸಹೋದರ ಸಖ್ರ್‌ನಿಗೆ ಗಂಭೀರ ಗಾಯವಾಯಿತು. ಆತನ ಪ್ರಾಣ ರಕ್ಷಣೆಗಾಗಿ ಖನ್ಸಾ(ರ) ನಿದ್ದೆ ತೊರೆದು ಚಿಕಿತ್ಸೆ ನಡೆಸಿದರು. ಆದರೆ ಅವರ ಎಲ್ಲ ಪ್ರಯತ್ನವೂ ವಿಫಲ ವಾಗಿ ಸಖ್ರ್ ಮರಣಹೊಂದಿದರು. ಈ ಘಟನೆಯು ಖನ್ಸಾರನ್ನು ಉದ್ವಿಗ್ನಗೊಳಿಸಿತು. ಅವರು ಹಲವು ವರ್ಷಗಳನ್ನು ಸಹೋದರರ ಸ್ಮರಣೆಯಿಂದ ಅಳುತ್ತಲೇ ಕಳೆದರು. ತಾಳಲಾಗದ ಶೋಕವು ಅವರ ಕವಿ ಹೃದಯದ ಭಾವನೆಗಳನ್ನು ಬಡಿದೆಬ್ಬಿಸಿತು. ಶೋಕ ಗೀತೆಗಳು ಅವರ ನಾಲಗೆಯಿಂದ ನಿರರ್ಗಳವಾಗಿ ಹೊರ ಹರಿಯಿತು. ಅವರ ಶೋಕ ಗೀತೆಗಳು ಶ್ರೋತೃಗಳ ಕಣ್ಣುಗಳನ್ನು ತೇವಗೊಳಿಸುತ್ತಿದ್ದವು. ಅವರ ಸಹೋದರರ ಕುರಿತು ಹೇಳುವಾಗ ತಲೆ-ಎದೆ ಬಡಿದುಕೊಳ್ಳುತ್ತಿದ್ದರು. ಬಟ್ಟೆಗಳನ್ನು ಹರಿದು ಶೋಕ ಆಚರಿಸುತ್ತಿದ್ದರು. ದಿನಂಪ್ರತಿ ಸಹೋದರರ ಸಮಾಧಿಯ ಬಳಿ ಹೋಗಿ ಖನ್ಸಾ(ರ) ಹೀಗೆ ಹಾಡುತ್ತಿದ್ದರು:

ಸಖ್ರ್‌ನನ್ನು ಸ್ಮರಿಸುತ್ತಿರುವೆ
ಎಲ್ಲ ಸೂರ್ಯೋದಯದ ವೇಳೆ
ಸಹೋದರರಿಗಾಗಿ ಅಳುವವರು
ನನ್ನ ಸುತ್ತಲಿಲ್ಲದಿರುತ್ತಿದ್ದರೆ
ಅಭಯ ಪಡೆಯುತ್ತಿದ್ದೆ
ಮೃತ್ಯುವಿನ ಕರಗಳಲ್ಲಿ.

ಸಹೋದರರ ಅಗಲಿಕೆಯ ತೀವ್ರ ಆಘಾತವು ಖನ್ಸಾರ(ರ) ಶೋಕಗೀತೆಗಳನ್ನು ಪ್ರಖ್ಯಾತಗೊಳಿಸಿತು. ಯೌವನದಲ್ಲಿ ಈ ರೀತಿ ವ್ಯಥೆ ಪಡುತ್ತಿದ್ದ ಖನ್ಸಾ(ರ) ವೃದ್ಧಾಪ್ಯದಲ್ಲಿ

ಪುತ್ರರೆಲ್ಲರನ್ನು ಕಳೆದುಕೊಂಡರೂ ಅಚಂಚಲರಾಗಿದ್ದುದಕ್ಕೆ ಅವರ ಜೀವನದ ದೃಷ್ಟಿಕೋನ ದಲ್ಲಾಗಿದ್ದ ಬದಲಾವಣೆಯೇ ಕಾರಣವಾಗಿತ್ತು. ಸಹೋದರರು ಮರಣ ಹೊಂದಿದಾಗ ಸಂತೋಷದಿಂದ ಪುನಃ ಭೇಟಿಯಾಗಬಹುದೆಂಬ ನಿರೀಕ್ಷೆ ಖನ್ಸಾರಿಗೆ(ರ) ಇರಲಿಲ್ಲ. ಆದರೆ ಮಕ್ಕಳನ್ನು ಬೀಳ್ಕೊಡುವಾಗ ದೇವ ಸನ್ನಿಧಿಯಲ್ಲಿ ಅವರನ್ನು ಭೇಟಿಯಾಗುವ ಭರವಸೆ ಅವರ ಮನದಲ್ಲಿ ತುಂಬಿತ್ತು.

ಖನ್ಸಾರು(ರ) ತಮ್ಮ ಕುಟುಂಬ ಸಂಬಂಧಿಕರ ಜತೆ ಪ್ರವಾದಿಯವರ(ಸ) ಬಳಿ ಬಂದು ಇಸ್ಲಾಮ್ ಧರ್ಮ ಸ್ವೀಕರಿಸಿದರು. ಪ್ರವಾದಿವರ್ಯರ(ಸ) ಅನುಚರರ ಕೋರಿಕೆಯಂತೆ ಖನ್ಸಾ(ರ) ಪ್ರವಾದಿಯವರ(ಸ) ಮುಂದೆ ತುಂಬಾ ಹೊತ್ತು ಶೋಕ ಗೀತೆಗಳನ್ನು ಹಾಡಿದರು. ಖನ್ಸಾರ ಕಾವ್ಯ ಪ್ರತಿಭೆ ಮತ್ತು ಸುಂದರ ಕವನ ವಾಚನವು ಪ್ರವಾದಿವರ್ಯರನ್ನು(ಸ) ಬೆರಗುಗೊಳಿಸಿತು. ಅನಂತರ ಖನ್ಸಾ(ರ) ಆಗಾಗ್ಗೆ ಪ್ರವಾದಿವರ್ಯರ(ಸ) ಪತ್ನಿ ಆಯಿಶಾ(ರ) ಬಳಿ ಹೋಗಿ ಶೋಕ ಗೀತೆಗಳನ್ನು ಹಾಡುತ್ತಿದ್ದರು. ಖನ್ಸಾರ(ರ) ಕವನಗಳು ವಿಶ್ವ ವಿಖ್ಯಾತವಾಗಿವೆ. ಇಬ್ನುಲ್ ಅಲ್‌ರಾಬಿ ಮುಂತಾದವರು ಅದರ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಕ್ರಿ.ಶ. 1889ರಲ್ಲಿ ಡೆ.ಕೋಪ್ಪಿಯರ್(De Coppeir) ಎಂಬ ಕ್ರೈಸ್ತ ವಿದ್ವಾಂಸರು ಅದನ್ನು ಫ್ರೆಂಚ್ ಭಾಷೆಗೆ ತರ್ಜುಮೆ ಮಾಡಿದ್ದರು.

ಪ್ರವಾದಿಯವರ(ಸ) ಕಾಲಾನಂತರ ಉಮರುಲ್ ಫಾರೂಕ್(ರ) ಅವರ ಆಡಳಿತ ಕಾಲದಲ್ಲಿ ಖನ್ಸಾ(ರ) ಅವರನ್ನು ಭೇಟಿಯಾಗಿದ್ದರು. ಆಗ ಖಲೀಫರು ಬಹಳ ದುಃಖ ತಪ್ತರಾಗಿದ್ದರು. ಸಚ್ಚರಿತರಾದ ಸಹೋದರ ಝೈದ್‌ರ ಮರಣವೇ ಅವರ ದುಃಖಕ್ಕೆ ಕಾರಣವಾಗಿತ್ತು. ಖನ್ಸಾರನ್ನು ನೋಡಿದ ಉಮರುಲ್ ಫಾರೂಕ್(ರ) ಅವರೊಡನೆ ಝೈದ್‌ರ ಕುರಿತು ಒಂದು ಶೋಕ ಗೀತೆಯನ್ನು ಹಾಡುವಂತೆ ತಿಳಿಸಿದರು. ತಕ್ಷಣವೇ ಅವರು ಹೀಗೆಂದರು:

"ಅಲ್ಲಾಹನಾಣೆ! ಸಖ್ರ್ ಮತ್ತು ಮುಆವಿಯಾರು ಝೈದ್‌ರಂತೆ ಮರಣ ಹೊಂದಿದ್ದರೆ (ಹುತಾತ್ಮರಾಗಿದ್ದರೆ) ನಾನು ಖಂಡಿತ ಅವರನ್ನು ನೆನೆಸಿ ಕಣ್ಣೀರು ಸುರಿಸುತ್ತಿರಲಿಲ್ಲ. ಆ ಮೂಲಕ ಅವರು ಹುತಾತ್ಮತೆ ಹಾಗೂ ಅನಿಸ್ಲಾಮಿಕ ಮರಣದ ಅಂತರವನ್ನು ನೆನಪಿಸಿದರು."

ಖನ್ಸಾರ ಉತ್ತರದಿಂದ ಉಮರ್(ರ) ಅವರು ಆಶ್ಚರ್ಯಚಕಿತರಾಗಿ ಹೀಗೆ ಹೇಳಿದರು. "ಇದು ನನಗೆ ದೊರೆತ ಸಂತಾಪ ಸೂಚನೆಯಲ್ಲಿ ಅತ್ಯಂತ ಆಕರ್ಷಕ ಮತ್ತು ಅರ್ಥ ಪೂರ್ಣವಾಗಿದೆ."

ಅರಬಿ ಸಾಹಿತ್ಯದಲ್ಲಿ ಪ್ರಸಿದ್ಧರಾಗಿ ಇಸ್ಲಾಮಿ ಇತಿಹಾಸದಲ್ಲಿ ಅವಿಸ್ಮರಣೀಯ ಮಾದರಿಯನ್ನು ನಿರ್ಮಿಸಿದ ಖನ್ಸಾ ಎಂಬ ಈ ವೀರ ಮಹಿಳೆಯು ಕ್ರಿ.ಶ. 575ರಲ್ಲಿ ಜನಿಸಿ ಕ್ರಿ.ಶ. 644ರಲ್ಲಿ ಮರಣಹೊಂದಿದರು.

---

# ವೀರ ಮಾತೆ

ಪವಿತ್ರ ಕಅಬಾ ಭವನವು ಜಗತ್ತಿನ ಶ್ರದ್ಧಾ ಕೇಂದ್ರವಾಗಿದೆ. ಮಕ್ಕಾ ನಗರವು ಅದರ ಉಪಸ್ಥಿತಿಯಿಂದ ಪುನೀತವಾಗಿದೆ. ಅದು ನಿರ್ಭೀತ ಅಭಯ ಕೇಂದ್ರವಾಗಿದೆ. ಅಲ್ಲಿ ಯಾರೂ ಪರಸ್ಪರ ಅನ್ಯಾಯವೆಸಗುವುದಿಲ್ಲ; ಒಂದು ಪುಟ್ಟ ಪ್ರಾಣಿಯನ್ನೂ ಹಿಂಸಿಸುವುದಿಲ್ಲ. ಹಕ್ಕಿಗಳಿಗೂ ಕಲ್ಲೆಸೆಯದಂತಹ ನಗರ. ಆದರೆ ಆ ಪವಿತ್ರ ನಗರವನ್ನು ಕಲುಷಿತಗೊಳಿಸಲಾಗಿದೆ! 50ದಿನಗಳಿಂದ ಆ ನಗರಕ್ಕೆ ದಿಗ್ಬಂದನ ಹಾಕಲಾಗಿದೆ! ದುಷ್ಟ ಹಾಗೂ ಮರ್ದಕ ಹಜ್ಜಾಜ್ ಬಿನ್ ಯೂಸುಫ್‌ರ ಸೈನ್ಯ ಆ ಕೃತ್ಯವೆಸಗಿದೆ. ಹಜ್ಜಾಜ್ ಅಮವೀ ಆಡಳಿತಗಾರ ಮರ್ವಾನ್ ಬಿನ್ ಹಕಮ್‌ರ ರಾಜ್ಯಪಾಲನಾಗಿದ್ದ.

ಅಮವಿ ಆಡಳಿತಗಾರರು ಭೀಕರ ಅಕ್ರಮ, ಅನ್ಯಾಯ ಮತ್ತು ಧರ್ಮ ವಿರೋಧಿ ಕೃತ್ಯಗಳನ್ನು ನಡೆಸುತ್ತಿದ್ದರು. ಅಂತಿಮ ಪ್ರವಾದಿ ಮುಹಮ್ಮದ್‌ರು(ಸ) ತೊಡೆದು ಹಾಕಿದ್ದ ಅನೇಕ ಕೆಡುಕು ಮತ್ತು ದುಷ್ಕೃತ್ಯಗಳನ್ನು ಅವರು ನಿರ್ಲಜ್ಜೆಯಂತೆ ನಡೆಸುತ್ತಿದ್ದರು. ಒಳಿತಿಗಾಗಿ ಶ್ರಮಿಸಿದ ಮತ್ತು ಸತ್ಯಕ್ಕಾಗಿ ವಾದಿಸಿದ ಜನರನ್ನು ಅವರು ಕಠೋರವಾಗಿ ಹಿಂಸಿಸಿದರು. ಸ್ವಜನ ಪಕ್ಷಪಾತ ಮತ್ತು ಗೋತ್ರ ಪಕ್ಷಪಾತಗಳನ್ನು ಪ್ರಚೋದಿಸಿದರು. ಆಡಳಿತಗಾರರ ಧರ್ಮ ವಿರೋಧಿ ಕೃತ್ಯಗಳನ್ನು ಪ್ರತಿಭಟಿಸುವ ಧೈರ್ಯವಿಲ್ಲದ ಭಕ್ತ ಜನರು ಆರಾಧನಾಲಯಗಳಲ್ಲಿ ಪ್ರಾರ್ಥನೆಗಳಲ್ಲಿ ತಲ್ಲೀನರಾದರು.

ಆದರೆ ಶ್ರೇಷ್ಠರಾದ ಅಬ್ದುಲ್ಲಾ ಬಿನ್ ಝುಬೈರ್‌ರಿಗೆ(ರ) ಹಾಗಿರಲು ಸಾಧ್ಯವಾಗಲಿಲ್ಲ. ತಾಯಿ ಅಸ್ಮಾರ(ರ) ಮೊಲೆಹಾಲಿನಿಂದಲೇ ಮೂಡಿ ಬಂದ ಆದರ್ಶ ನಿಷ್ಠೆಯು ಅವರನ್ನು ಉನ್ನತಗೊಳಿಸಿತ್ತು. ತಂದೆ ಝುಬೈರ್ ಬಿನ್ ಅವ್ವಾಮ್‌ರು(ರ) ಅವರಲ್ಲಿ ಧೈರ್ಯ ಮತ್ತು ಸ್ಫೂರ್ತಿಯನ್ನು ಬೆಳೆಸಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಅವರು ಪ್ರವಾದಿಯವರ(ರ) ಪಾಠಶಾಲೆಯಲ್ಲಿ ಇಸ್ಲಾಮೀ ಶಿಕ್ಷಣವನ್ನು ಪಡೆದಿದ್ದರು. ಆದ್ದರಿಂದ ಆಡಳಿತ ವರ್ಗದ ದಬ್ಬಾಳಿಕೆಗೆ ಮಣಿಯಲು ಇಸ್ಲಾಮಿನ ಆ ವೀರ ಪುತ್ರನಿಗೆ ಸಾಧ್ಯವಾಗಲಿಲ್ಲ. ಅಧರ್ಮದ ಶಕ್ತಿಗಳ ವಿರುದ್ಧ ಸುಮ್ಮನಿರಲು ಅವರು ಒಪ್ಪಲಿಲ್ಲ. ಸತ್ಯವನ್ನು ಹೇಳದವರು ಮೂಕ ಪಿಶಾಚಿಗಳೆಂಬ ಪ್ರವಾದಿವರ್ಯರ(ಸ) ನುಡಿಯು ಅವರನ್ನು ಜಾಗೃತ ಗೊಳಿಸಿತು. ಶೋಷಕ ವರ್ಗವನ್ನು ಪ್ರತಿಭಟಿಸದಿರುವ ಸ್ಥಿತಿಯಿರಬಾರದೆಂದು ಅವರು ದೃಢ ನಿಶ್ಚಯ ಮಾಡಿದರು. ಅದಕ್ಕಾಗಿ ಅಮವಿ ಆಡಳಿತಗಾರರ ವಿರುದ್ಧ ರಂಗಕ್ಕಿಳಿದರು.

ಆರಂಭ ಹಂತದಲ್ಲಿ ಮಕ್ಕಾ ಮತ್ತು ಇರಾಕ್ ಅಬ್ದುಲ್ಲಾ ಬಿನ್ ಝುಬೈರ್‌ರ(ರ) ಅಧೀನವಿತ್ತು. ಆದರೆ ಇರಾಕ್‌ನ ಆಡಳಿತಗಾರನಾಗಿದ್ದ ಸಹೋದರ ಮಿಸ್‌ಅಬ್ ವಧಿಸಲ್ಪಟ್ಟ ನಂತರ ಅದು ಅಮವಿಯವರ ವಶವಾಯಿತು. ಹೀಗೆಯೇ ಆರಂಭ ಹಂತದಲ್ಲಿ ಹಿಜಾಝ್‌ನ ಯುದ್ಧ ಫಲಿತಾಂಶವೂ ಅವರಿಗೆ ಅನುಕೂಲವಾಗಿತ್ತು. ಆದರೆ ಕಣ್ಣಿನಲ್ಲಿ ರಕ್ತ ಮತ್ತು ಮನದಲ್ಲಿ ಕರುಣೆಯಿಲ್ಲದ ಹಜ್ಜಾಜ್‌ನ ಆಕ್ರಮಣವನ್ನು ಇಬ್ನ್ ಝುಬೈರ್‌ರ(ರ) ಸೇನೆಗೆ ಹೆಚ್ಚುಕಾಲ ತಡೆಹಿಡಿಯಲಾಗಲಿಲ್ಲ. ಅವರು ಸೋಲೊಪ್ಪಿಕೊಂಡರು.

ಕಅಬಾದ ಪಾವಿತ್ರ್ಯವು ಹಜ್ಜಾಜ್‌ನಿಗೆ ಸಮಸ್ಯೆಯಾಗಿರಲಿಲ್ಲ. ಆತನ ಸೇನೆಯು ಅದರ ಮೇಲೆ ಕವಣೆಯಿಂದ ಕಲ್ಲೆಸೆಯಿತು. ಕಲ್ಲಿನ ಹೊಡೆತದಿಂದ ಆ ಪುಣ್ಯಭವನಕ್ಕೆ ಹಾನಿಯಾಯಿತು. ಅದರ ಗೋಡೆಗಳು ಕುಸಿದವು. ಅದರ ಸುತ್ತಲೂ ಹಲವರು ಸಾವನ್ನಪ್ಪಿದರು. ಯುದ್ಧರಂಗದಲ್ಲಿ ಹಜ್ಜಾಜ್ ಜಯಗಳಿಸಿದ್ದರಿಂದ ಅಬ್ದುಲ್ಲಾ ಬಿನ್ ಝುಬೈರ್‌ರ(ರ) ಸೇನೆಯ ಕೆಲವು ದುರ್ಬಲ ಮನಸ್ಕ ಹೇಡಿಗಳು ನಿಷ್ಠಾಂತರ ಮಾಡಿದರು. ಆ ಪೈಕಿ ಅವರ ಅನುಯಾಯಿಗಳೂ ಆಪ್ತ ಸಂಬಂಧಿಕರೂ ಇದ್ದರು. ಇದು ಅಬ್ದುಲ್ಲಾ ಬಿನ್ ಝುಬೈರ್‌ರನ್ನು(ರ) ಚಿಂತೆಗೀಡು ಮಾಡಿತು. ತೀವ್ರ ಕಳವಳ ಮತ್ತು ದುಃಖದಿಂದ ಅವರು ಸಮಾಧಾನಕ್ಕಾಗಿ ಪ್ರೀತಿಯ ತಾಯಿಯ ಬಳಿಗೆ ಹೋದರು.

ಇಬ್ನ್‌ಝುಬೈರ್‌ರ(ರ) ತಾಯಿ ಅಸ್ಮಾರು(ರ) ಖಲೀಫಾ ಅಬೂಬಕರ್‌ರ(ರ) ಪುತ್ರಿ, ಪ್ರವಾದಿವರ್ಯರ(ಸ) ಪತ್ನಿ ಆಯಿಶಾರ(ರ) ಸಹೋದರಿಯಾಗಿದ್ದರು. ತಂದೆಯಿಂದ ಅವರಿಗೆ ಸಾಕಷ್ಟು ಶಿಕ್ಷಣ-ತರಬೇತಿ ದೊರಕಿತ್ತು. ಅವರು, ಪ್ರವಾದಿ(ಸ) ಅತ್ಯಂತ ಗೌಪ್ಯವಾಗಿ ನಡೆಸಿದ ವಲಸೆಯ ಕುರಿತು ಅರಿತಿದ್ದ ಜಗತ್ತಿನ ಏಕೈಕ ಮಹಿಳೆಯಾಗಿದ್ದರು.

ಈಗ ಅವರ ವಯಸ್ಸು ನೂರು ದಾಟಿದೆ. ವೃದ್ಧಾಪ್ಯದಿಂದ ಮೈ ಸುಕ್ಕುಗಟ್ಟಿದೆ. ಮುಖ, ಕೈ, ಕಾಲು ಕ್ಷೀಣಿಸಿವೆ, ಕಣ್ಣು ಮಂಜಾಗಿದೆ. ಆದರೂ ಅವರ ಹಿಂದಿನ ಉತ್ಸಾಹ ಕುಂದಿಲ್ಲ. ಆ ಮುಖದಲ್ಲಿ ಸ್ಥೈರ್ಯದ ತೇಜಸ್ಸು ಆರಿ ಹೋಗಿಲ್ಲ. ಮನಸ್ಸು ಸುದೃಢವಾಗಿತ್ತು. ಇಸ್ಲಾಮೀ ರಾಷ್ಟ್ರದ ಪ್ರಚಲಿತ ಪರಿಸ್ಥಿತಿ ಮಾತ್ರ ಅವರನ್ನು ಚಿಂತಾಕುಲಗೊಳಿಸಿತ್ತು. ಇರಾಕ್‌ನಲ್ಲಿ ಪುತ್ರ ಮಿಸ್‌ಅಬ್ ಕೊಲೆಯಾದ ಸುದ್ದಿಗಿಂತ ಹೆಚ್ಚಾಗಿ ಇಸ್ಲಾಮೀ ಆಡಳಿತದ ಪತನವು ಆ ವೀರ ಮಾತೆಯನ್ನು ದುಃಖಕ್ಕೀಡು ಮಾಡಿತ್ತು. ತಮ್ಮ ಬಳಿ ಬಂದ ಪುತ್ರನೊಡನೆ ಅಸ್ಮಾ(ರ) ಕೇಳಿದರು:

"ಯಾರದು? ಅಬ್ದುಲ್ಲನೇ? ನೀನು ಯಾಕೆ ಇಲ್ಲಿಗೆ ಬಂದೆ?"

"ಅಮ್ಮಾ ನಾನು ಒಂಟಿಯಾಗಿದ್ದೇನೆ ಎಲ್ಲರೂ ನಿಷ್ಠಾಂತರ ಮಾಡಿದ್ದಾರೆ. ನನ್ನ ಮಕ್ಕಳಾದ ಹಮ್‌ಝಾ ಮತ್ತು ಹಬೀಬ್ ಕೂಡಾ ಇದಿರು ಪಕ್ಷ ಸೇರಿದ್ದಾರೆ."

ಇಬ್ನ್ ಝುಬೈರ್(ರ) ತಮ್ಮ ಅಸಹಾಯಕತೆಯನ್ನು ತಿಳಿಸಿದರು.

"ಮಗನೇ! ಹಾಗಾದರೇನಾಯಿತು? ನೀನು ಸತ್ಯಕ್ಕಾಗಿ ಹೋರಾಡುತ್ತಿರುವೆಯೆಂಬ ಖಚಿತ ಭರವಸೆ ನಿನಗಿದೆಯೆಂದೇ ನಾನು ಭಾವಿಸಿದ್ದೇನೆ. ಹೋಗು ರಣರಂಗಕ್ಕೆ! ನಿನ್ನ ಸಂಗಡಿಗರು ಅಲ್ಲಿಯೇ ಸಾವನ್ನಪ್ಪಿದ್ದಾರೆ. ಒಂದು ವೇಳೆ ನೀನು ಲೌಕಿಕ ಲಾಭಕ್ಕಾಗಿ ಹೋರಾಡಿದ್ದರೆ ನೀನು ನಿನ್ನನ್ನೂ ನಿನ್ನ ಜತೆ ಹೋರಾಡಿದವರನ್ನೂ ನಾಶ ಗೊಳಿಸಿದಂತೆಯೇ ಸರಿ" ಧೀರ ಮಹಿಳೆ ಅಸ್ಮಾ(ರ) ಉಚ್ಚ ಸ್ವರದಲ್ಲಿ ಹೇಳಿದರು.

"ಅಮ್ಮಾ ನಾನು ಖಂಡಿತವಾಗಿಯೂ ಸತ್ಯಕ್ಕಾಗಿ ಹೋರಾಡಿದ್ದೆ. ಆದರೆ...." ಮಗನ ಮಾತು ಮುಗಿಯುವುದಕ್ಕಿಂತ ಮೊದಲೇ ತಾಯಿ ಹೇಳಿದರು:

"ಸಂಗಡಿಗರೆಲ್ಲರೂ ಹೊರಟು ಹೋದರೆಂದು ಚಿಂತಿಸುತ್ತಿರುವೆಯಾ? ಹಾಗಾದರೆ ಇದು ವೀರರ ಮಾರ್ಗವಲ್ಲ. ವಿಶ್ವಾಸಿಗಳ ನಡತೆಯಲ್ಲ ಅಥವಾ ಒಂದು ವೇಳೆ ರಣರಂಗ ದಿಂದ ದೂರ ನಿಂತರೂ ನಿನಗೆ ಏನು ದೊರೆತೀತು? ಇಲ್ಲಿ ಶಾಶ್ವತವಾಗಿರಲು ಸಾಧ್ಯವೇ? ಹೀನನಾಗಿ ದೀರ್ಘ ಕಾಲ ಬಾಳುವುದಕ್ಕಿಂತ ಧೈರ್ಯದಿಂದ ಬೇಗ ಸಾಯುವುದೇ ಉತ್ತಮ."

"ನನಗೆ ಮರಣ ಭೀತಿಯಿಲ್ಲ" ಇಬ್ನು ಝುಬೈರ್ ಸ್ಪಷ್ಟ ಪಡಿಸಿದರು.

"ಹೌದು ಮಗನೇ, ವೀರನಾಗಿ ಮರಣಹೊಂದು. ಇಲ್ಲದಿದ್ದರೆ ಗೌರವದಿಂದ ಬಾಳು! ಹೀನನಾಗಿ ಒಂದು ಕ್ಷಣವೂ ಬಾಳಬಾರದು" ನೂರು ವರ್ಷ ಮೀರಿದ ತಾಯಿ 20 ವರ್ಷ ವಯಸ್ಸಿನ ಓರ್ವ ಸಾಹಸಿ ಯುವಕನಂತೆ ಆ ಮಾತುಗಳನ್ನು ಹೇಳಿದರು.

"ವೈರಿಗಳು ನನ್ನನ್ನು ಕೊಂದ ಬಳಿಕ ಶಿಲುಗೇರಿಸುವರೆಂದು ಅಂಜಿಕೆಯಾಗುತ್ತಿದೆ." ಪುತ್ರನು ತನ್ನ ಶಂಕೆಯನ್ನು ತಿಳಿಸಿದನು.

"ಕತ್ತು ಕೊಯ್ದ ಆಡಿಗೆ ಅದರ ಚರ್ಮ ಸುಲಿಯುವಾಗ ನೋವಾಗುತ್ತದೆಯೇ?" ತಾಯಿಯ ಈ ಸಾಂತ್ವನದ ಮಾತುಗಳಿಂದ ಇಬ್ನು ಝುಬೈರ್‌ರಿಗೆ(ರ) ಸ್ಫೂರ್ತಿ ಬಂತು. ಸ್ವಲ್ಪ ಸಮಯದ ಮೌನದ ಬಳಿಕ ಅವರು ವಿದಾಯ ಕೋರಿದರು. ಜೀವನದ ಮುಸ್ಸಂಜೆಯಲ್ಲಿ ಆಸರೆಯಾಗಲಿದ್ದ ಮುದ್ದು ಪುತ್ರನನ್ನು ಅಸ್ಮಾ(ರ) ಆಶೀರ್ವದಿಸಿ ಯುದ್ಧರಂಗಕ್ಕೆ ಬೀಳ್ಕೊಟ್ಟರು. ಅವರು ಹೀಗೆಂದರು:

"ಮಗನೇ ಹೋಗು! ನಾಳೆ ಅಲ್ಲಾಹನ ಸನ್ನಿಧಾನದಲ್ಲಿ ಭೇಟಿಯಾಗೋಣ.!"

ತರುವಾಯ ಅಸ್ಮಾರು(ರ) ಮಗನಿಗೆ ಧೈರ್ಯ ಸ್ಥೈರ್ಯ ತುಂಬುವಂತೆ ಅಲ್ಲಾಹನಲ್ಲಿ ಪ್ರಾರ್ಥಿಸಿದರು. ಚಿರಂತನ ಸುಖ ಸಮೃದ್ಧಿಯಿಂದ ತುಂಬಿ ತುಳುಕುವ ಸ್ವರ್ಗದಲ್ಲಿ ಭೇಟಿಯಾಗುವೆನೆಂಬ ನಿರೀಕ್ಷೆಯಿಂದ ಮಗನನ್ನು ಯುದ್ಧರಂಗಕ್ಕೆ ಕಳುಹಿಸಿದರು.

ಅಬ್ದುಲ್ಲಾ ಬಿನ್ ಝುಬೈರ್(ರ) ವೀರಾವೇಶದಿಂದ ಹೋರಾಡಿ ಹುತಾತ್ಮರಾದರು. ಕ್ರೂರಿಗಳಾಗಿದ್ದ ವೈರಿಗಳು ನಿರೀಕ್ಷೆಯಂತೆ ಅವರ ಕಳೇಬರವನ್ನು ಶಿಲುಬೆಗೆ ನಾಟಿದರು. ಅಸ್ಮಾ(ರ) ವಿನಂತಿಸದೆ ಆ ಕಳೇಬರವನ್ನು ಅಲ್ಲಿಂದ ಇಳಿಸಿ ದಫನ ಮಾಡುವುದಿಲ್ಲ ವೆಂದು ಅವರು ಶಪಥ ಹಾಕಿದರು.

ಆದರೆ ಶೌರ್ಯದ ಪ್ರತೀಕವಾಗಿದ್ದ ಅಸ್ಮಾ(ರ) ಮಣಿಯಲಿಲ್ಲ. ಮಗನ ದೇಹವನ್ನು ಹಕ್ಕಿಗಳು ಕುಕ್ಕಿ ಎಳೆಯುವುದನ್ನೂ ನೋಡಿಯೂ ಅವರು ಅಧೀರರಾಗಲಿಲ್ಲ. ಕೆಲವು ದಿನಗಳ ಬಳಿಕ ಕಂಬದಲ್ಲಿ ನೇತಾಡುತ್ತಿದ್ದ ಪುತ್ರನ ಕಳೇಬರವನ್ನು ನೋಡಿ ಅವರು ಹೀಗೆ ಪ್ರಶ್ನಿಸಿದರು.

"ಮಗನೇ ನೀನಿನ್ನೂ ಹೋಗಲಿಲ್ಲವೇ?"

ಅಸ್ಮಾರ(ರ) ಈ ಮಾತುಗಳನ್ನು ಬಳಸಿ ಅಬ್ದುಲ್ಲಾ ಬಿನ್ ಝುಬೈರ್‌ರ(ರ) ಕಳೇಬರವನ್ನು ಹಜ್ಜಾಜ್ ಕೆಳಗಿಳಿಸಿ ದಫನ ಮಾಡಿಸಿದನು. ಈ ಸುದ್ದಿ ತಿಳಿದ ಆ ವೀರ ಮಾತೆಯು 'ಇದು ಮೋಸ- ವಂಚನೆ' ಎಂದು ಹೇಳಿದರು.

ಮಗನ ಕಳೇಬರವನ್ನು ದಫನ ಮಾಡುವಂತೆ ನಾನು ಯಾರನ್ನೂ ವಿನಂತಿಸಿರಲಿಲ್ಲವೆಂದು ಅವರಿಗೆ ತಿಳಿದಿತ್ತು. ಆ ಬಗ್ಗೆ ಒತ್ತಾಯಿಸುವುದಿಲ್ಲವೆಂದು ಅವರು ನಿರ್ಧರಿಸಿದರು. ಸಾಯುವುದಕ್ಕಾಗಿ ಮಗನನ್ನು ಹುರಿದುಂಬಿಸಿ ಕಳುಹಿಸಿದ ಆ ಮಾತೆಯು ಕಳೇಬರದ ದಫನಕ್ಕಾಗಿ ಆತುರ ಪಟ್ಟಾರೇ? ಅದಕ್ಕಾಗಿ ರಕ್ತದಾಹಿಗಳಾದ ಅಮವೀಗಳನ್ನು ವಿನಂತಿಸಿಯಾರೇ? ಅಸ್ಮಾ(ರ) ಎಲ್ಲ ಲೆಕ್ಕಾಚಾರಗಳನ್ನು ಮೀರಿಸಿದ್ದರು. ಇತಿಹಾಸದಲ್ಲಿ ಹೆಚ್ಚಿನ ಜನರಿಗೆ ಏರಲಾಗದ ಎತ್ತರಕ್ಕೆ ಅವರು ಏರಿದ್ದರು.

---

# ಖಲೀಫರ ಪತ್ನಿ

"ನಿಮ್ಮ ಪತಿ ಆಡಳಿತಗಾರರಾಗಿದ್ದಾರೆ." ಒಬ್ಬರು ಓಡಿ ಬಂದು ಫಾತಿಮಾರಿಗೆ ತಿಳಿಸಿದರು. ಅದಾಗಲೇ ಮಸೀದಿಯಲ್ಲಿ ಹೊಸ ಖಲೀಫರನ್ನು ಚುನಾಯಿಸಿ ಅಂಗೀಕರಿಸ ಲಾಗಿತ್ತು. ಫಾತಿಮಾ ಆ ಸುದ್ದಿಯನ್ನೂ ನಿರೀಕ್ಷಿಸಿದ್ದರು. ಆದ್ದರಿಂದ ಅವರಿಗೆ ಅಚ್ಚರಿಯಾಗಿರಲಿಲ್ಲ. ಮಾತ್ರವಲ್ಲ ಅದರಿಂದ ತಮ್ಮ ಪರಿಸ್ಥಿತಿ ಉತ್ತಮವಾದೀತೆಂಬ ಆಸೆಯೂ ಇರಲಿಲ್ಲ. ಓರ್ವ ಮಹಿಳೆಯು ಬಯಸುವುದೆಲ್ಲವೂ ಅವರಿಗೆ ಅದಾಗಲೇ ದೊರೆತಿತ್ತು. ಸೌಂದರ್ಯ, ಕುಲೀನತೆ, ಶ್ರೀಮಂತಿಕೆ, ಸುಶೀಲನಾದ ಪತಿ, ಸುಖಮಯ ಜೀವನ, ಆಡಳಿತ ಇತ್ಯಾದಿ.

ಫಾತಿಮಾ ಖಲೀಫರ ಮನೆಯಲ್ಲಿಯೇ ಹುಟ್ಟಿದರು. ಅವರು ಆಡಳಿತಗಾರ ಅಬ್ದುಲ್ ಮಲಿಕ್‌ರ ಪುತ್ರಿ. ಅವರು ಸುಖ ವೈಭೋಗ್ಯದ ರಾಶಿಯಲ್ಲಿಯೇ ಬೆಳೆದಿದ್ದರು. ಕೌಮಾರ್ಯಕ್ಕೆ ಕಾಲಿರಿಸಿದಾಗ ಸುಂದರನಾಗಿದ್ದ ಯೋಗ್ಯ ಪತಿ ದೊರೆತರು. ತಂದೆಯ ಮರಣದ ಬಳಿಕ ಆಡಳಿತಾಧಿಕಾರದ ಆಶ್ರಯವನ್ನು ಅವರು ಕಳೆದುಕೊಳ್ಳಲಿಲ್ಲ. ಅನಂತರ ಆಡಳಿತವು ಅವರ ಸಹೋದರರ ಕೈ ಸೇರಿತ್ತು.

ಪ್ರಿಯತಮನ ಹೊಸ ಹುದ್ದೆಯಿಂದ ಫಾತಿಮಾರಿಗೆ ತುಂಬಾ ಸಂತೋಷವಾಯಿತು. ಅವರು ತಮ್ಮ ಪರಿವಾರದ ಜತೆ ಆಗಮಿಸುವುದನ್ನೇ ಕಾತರದಿಂದ ಕಾಯುತ್ತಿದ್ದರು. ಪತಿಯನ್ನು ಅಭಿನಂದಿಸಿ ಸ್ವಾಗತಿಸಲು ಅವರ ಮನ ಹಂಬಲಿಸಿತು.

ಆದರೆ ಫಾತಿಮಾರ ಲೆಕ್ಕಾಚಾರ ತಪ್ಪಿತು. ಕನಸಿನಲ್ಲಿಯೂ ಊಹಿಸದಂತಹ ಸುದ್ದಿ ಅವರ ಕಿವಿಗೆ ಬಿತ್ತು. ಹೊಸ ಖಲೀಫರು ತಮ್ಮ ಪರಿವಾರವನ್ನು ಬರ್ಖಾಸ್ತು ಗೊಳಿಸಿದ್ದಾರೆ. ಸಮಾರಂಭಗಳನ್ನು ನಿಷೇಧಿಸಿ ಆಡಂಬರಗಳನ್ನು ತೊರೆದಿದ್ದಾರೆ. ಸರಕಾರೀ ವಾಹನಗಳನ್ನೂ, ಅಂಗರಕ್ಷಕರನ್ನೂ ವಜಾಗೊಳಿಸಿದ್ದಾರೆ. ಸಾರ್ವಜನಿಕ ಬೊಕ್ಕಸದಿಂದ ಸ್ವಂತ ಖರ್ಚಿಗೂ ಹಣ ತೆಗೆಯುವುದಿಲ್ಲವೆಂದು ಶಪಥ ಮಾಡಿದ್ದಾರೆ. ಅರಮನೆಯನ್ನು ತೊರೆದು ಗುಡಿಸಲಲ್ಲಿ ವಾಸಿಸಲು ನಿರ್ಧರಿಸಿದ್ದಾರೆ. ಈ ಸುದ್ದಿಯನ್ನು ಫಾತಿಮಾರಿಗೆ ನಂಬಲಾಗುತ್ತಿರಲಿಲ್ಲ. ಏಕೆಂದರೆ ಅವರು ಅರಿತಿದ್ದ ಉಮರ್ ಅಷ್ಟೊಂದು ಆಡಂಬರ ಪ್ರಿಯರಾಗಿದ್ದರು. ಸುಖ ವೈಭೋಗಗಳಲ್ಲಿ ಮುಳುಗಿದ್ದರೂ ತೃಪ್ತರಾಗದವರಾಗಿದ್ದರು!

ಅವರ ಮನದಲ್ಲಿ ಹಳೆಯ ನೆನಪುಗಳು ಸುಳಿದಾಡಿದುವು. ಅದೆಷ್ಟು ಸಿಹಿ ನೆನಪುಗಳು! ತಂದೆಯ ಅರಮನೆಯಿಂದ ಉಮರ್‌ರ ಅರಮನೆಗೆ ಬಂದ ದಿನ. ಆ ಅರಮನೆಯು ಆಡಳಿತಗಾರನಾಗಿದ್ದ ತಂದೆಯ ಅರಮನೆಗಿಂತ ವೈಭವ ಪೂರ್ಣವಾಗಿತ್ತು. ಅಲ್ಲಿನ ಅಲಂಕಾರ ಸಾಧನಗಳೇನು! ಆಕರ್ಷಕ ವಸ್ತುಗಳ ಭಂಡಾರವೇನು! ಅತ್ಯಧಿಕ ಬೆಳೆಬಾಳುವ ವಸ್ತ್ರಗಳನ್ನು ತೊಟ್ಟು, ಅತ್ಯುತ್ತಮ ಸುಗಂಧ ದ್ರವ್ಯಗಳನ್ನು ಪೂಸಿ, ಠೀವಿಯಿಂದ ನಡೆದು ಬರುತ್ತಿರುವ ಪತಿಯ ಗಾಂಭೀರ್ಯವೇನು!

ಅಷ್ಟರಲ್ಲಿ ಉಮರ್ ಬಿನ್ ಅಬ್ದುಲ್ ಅಝೀಝ್ ಅರಮನೆಗೆ ತಲಪಿದರು. ಅವರ ಕಣ್ಣುಗಳು ಊದಿಕೊಂಡಿದ್ದವು. ಮುಖದಲ್ಲಿ ದುಃಖ ಹೆಪ್ಪುಗಟ್ಟಿತ್ತು. ಫಾತಿಮಾರಿಗೆ ಏನೂ ಅರ್ಥವಾಗಲಿಲ್ಲ. ಖಲೀಫರಾಗಿ ಆಯ್ಕೆಯಾದುದಕ್ಕೆ ಆನಂದಿಸುವ ಬದಲಾಗಿ ದುಃಖಿಸುವುದೇ? ಪತಿಯ ಚಿಂತೆಯ ಕಾರಣವನ್ನು ಅವರಿಗೆ ಗ್ರಹಿಸಲಾಗಲಿಲ್ಲ. ಆದರೂ ತನ್ನ ಮಾನಸಿಕ ತುಮುಲವನ್ನು ತೋರ್ಪಡಿಸದೆ, ಅವರು ಪತಿಯ ಬಳಿಗೆ ಹೋದರು. ಕುಶಲ ವಿಚಾರಿಸಿದ ಬಳಿಕ ಉಮರ್ ತನ್ನ ಹೊಸ ನಿರ್ಧಾರವನ್ನು ಪತ್ನಿಗೆ ತಿಳಿಸಿದರು:

"ಫಾತಿಮಾ! ಬಹಳ ಭಾರವಾದ ಹೊಣೆಯನ್ನು ನನ್ನ ಮೇಲೆ ಹೊರಿಸಲಾಗಿದೆ. ಇದು ನನ್ನ ಮಟ್ಟಿಗೆ ಹೊರಲಾಗದ ಹೊಣೆಯಾಗಿದೆ. ಈ ಸಮುದಾಯದಲ್ಲಿ ಸಂಕಷ್ಟದಲ್ಲಿರುವ ಪ್ರತಿಯೊಬ್ಬರ ಕುರಿತು ನನ್ನೊಡನೆ ಪ್ರಶ್ನಿಸಲಾಗುವುದು. ಆದ್ದರಿಂದ ಪ್ರಿಯೆ! ನಾನು ನಿನ್ನ ಅವಶ್ಯಕತೆಗಳನ್ನು ಪೂರೈಸಿದ ಬಳಿಕ ಉಳಿದ ಸಮಯದಲ್ಲಿ ಮಾತ್ರ ಇತರರ ಬಗ್ಗೆ ಚಿಂತಿಸಿದರೆ ಸಾಲದು. ನೀನು ನನ್ನ ಮನಸ್ಸನ್ನು ಸೂರೆಗೈದಿರುವೆ. ನಿನ್ನಿಂದ ಅಗಲುವುದು ನನಗೆ ಅಸಹ್ಯವಾಗಿದೆ. ನಿನಗಿಂತ ಉನ್ನತ ಸ್ಥಾನವನ್ನು ನಾನು ಯಾರಿಗೂ ನೀಡಿಲ್ಲ. ನಿನಗೆ ಅನ್ಯಾಯವಾಗಬಾರದೆಂದೂ ನಾನು ಭಾವಿಸುತ್ತೇನೆ.

ಮುಂದಿನ ಜೀವನದಲ್ಲಿ ನಾನು ಆಯ್ಕೆ ಮಾಡುವ ರೀತಿಗೆ ಹೊಂದಿಕೊಳ್ಳಲು ನಿನ್ನಿಂದ ಸಾಧ್ಯವಾದೀತೇ ಎಂಬ ಸಂದೇಹವುಂಟಾಗಿದೆ."

"ನೀವೇನು ಹೇಳುತ್ತಿರುವಿರಿ? ನನಗೊಂದೂ ಅರ್ಥವಾಗುವುದಿಲ್ಲ" ಫಾತಿಮಾ ಹೇಳಿದರು.

"ನಮ್ಮ ಮತ್ತು ನಿನ್ನ ಸಹೋದರರ ಹಾಗೂ ಇತರ ಸಂಬಂಧಿಕರ ಬಳಿಯಿರುವ ಸೊತ್ತು ಮುಸ್ಲಿಮ್ ಜನಸಾಮಾನ್ಯರಿಗೆ ಸೇರಿದ್ದು, ನಮ್ಮ ಹಿಂದಿನವರು ಅದನ್ನು ಅನ್ಯಾಯವಾಗಿ ಸ್ವಾಧೀನಪಡಿಸಿದ್ದಾರೆ. ಆದ್ದರಿಂದ ಅವುಗಳನ್ನು ಮುಟ್ಟುಗೋಲು ಹಾಕಿ ಅದರ ನೈಜ ಹಕ್ಕುದಾರರಿಗೆ ನೀಡಲು ನಾನು ನಿರ್ಧರಿಸಿದ್ದೇನೆ. ಅದನ್ನು ನನ್ನಿಂದಲೇ ಆರಂಭಿಸುತ್ತೇನೆ. ನಾನು ಶ್ರಮಪಟ್ಟು ಬೆಳೆಸಿದ ತೋಟದ ಹೊರತು ಉಳಿದವುಗಳನ್ನು ಅವುಗಳ ಮಾಲಕರಿಗೆ ಬಿಟ್ಟು ಕೊಡುತ್ತೇನೆ. ಈ ತನಕ ಸುಖವಿಲಾಸದಿಂದ ಬಾಳಿದ ನಿನಗೆ ನನ್ನೊಂದಿಗೆ ಹೊಂದಿಕೊಳ್ಳಲು ಕಷ್ಟವಾದೀತೆಂದು ಅಂಜುತ್ತೇನೆ. ಪ್ರಿಯೆ! ಮುಂದೆ ಜೀವನವು ಬಹಳ ಸಂಕಷ್ಟಮಯವಾಗಿರುವಂತೆ ತೋರುತ್ತಿದೆ. ನಿನಗೆ ಅದನ್ನು ತಾಳಿಕೊಳ್ಳಲು ಸಾಧ್ಯವಾಗದೆನಿಸುತ್ತದೆ."

"ಈಗ ದಿಢೀರನೆ ಇಂತಹ ನಿರ್ಧಾರ ಕೈಗೊಳ್ಳಲು ಕಾರಣವೇನು?" ಫಾತಿಮಾ ಪ್ರಶ್ನಿಸಿದರು.

"ಫಾತಿಮಾ ನಿನಗೆ ನನ್ನ ಸ್ವಭಾವ ತಿಳಿದಿದೆಯಷ್ಟೆ. ಒಂದು ದೊರೆತರೆ ಇನ್ನೊಂದು ದೊರಕಬೇಕೆಂದು ಆಶಿಸುತ್ತೇನೆ. ಈಗ ಭೂಮಿಯಲ್ಲಿ ನಾನು ಬಯಸಬಹುದಾದ ಎಲ್ಲಕ್ಕಿಂತ ಉತ್ತಮವಾದುದು ದೊರೆತಿದೆ. ಇನ್ನು ಸ್ವರ್ಗವೇ ನನ್ನ ಬಯಕೆ. ಆದ್ದರಿಂದ ಪ್ರಿಯೆ! ನೀನು ಎರಡರಲ್ಲೊಂದು ಆಯ್ದುಕೊಳ್ಳಬಹುದು. ಆಡಂಬರಮಯ ಜೀವನ ಅಥವಾ ನನ್ನೊಂದಿಗಿನ ಸಹಬಾಳ್ವೆ. ಅವೆರಡೂ ಜೊತೆಯಾಗಿ ಸರ್ವಥಾ ಸಾಗಲಾರವು."

ಗದ್ಗದ ಸ್ವರದಿಂದ ಉಮರ್ ಆ ಮಾತು ಹೇಳಿ ಮುಗಿಸಿದರು. ಕಣ್ಣೀರ ಹನಿಗಳು ಅವರ ಕಪೋಲ ಮತ್ತು ಗಡ್ಡದಿಂದ ಇಳಿದು ಎದೆಯನ್ನು ತೊಯ್ದಿತ್ತು.

"ನಿಮಗಿಷ್ಟವಿರುವಂತೆ ಮಾಡಿರಿ. ನಾನು ಸದಾ ನಿಮ್ಮ ಜತೆಗಿರುತ್ತೇನೆ. ಸುಖ ಸಮೃದ್ಧಿಯಲ್ಲಿ ನಿಮ್ಮ ಜೊತೆಗಿದ್ದೆ, ಸಂಕಷ್ಟಗಳಿಗಾಗಿ ನಾನು ನಿಮ್ಮಿಂದ ದೂರವಾಗ ಬಯಸುವುದಿಲ್ಲ. ನಿಮ್ಮ ತೃಪ್ತಿಯೇ ನನ್ನ ತೃಪ್ತಿ. ಅಹಿತಕರವಾದುದನ್ನು ತೊರೆಯಲು ನಾನು ಸಿದ್ಧಳಿದ್ದೇನೆ." ಫಾತಿಮಾ ದೃಢ ಸ್ವರದಲ್ಲಿ ಹೇಳಿದರು.

ಪ್ರಿಯ ಪತ್ನಿಯ ಪ್ರತಿಕ್ರಿಯೆಯಿಂದ ಉಮರ್ ಬಿನ್ ಅಬ್ದುಲ್ ಅಝೀಝ್‌ರಿಗೆ ಸಮಾಧಾನವಾಯಿತು. ಫಾತಿಮಾರ ಹೆಗಲ ಮೇಲೆ ಕೈಯಿಟ್ಟು ಅವರು ಹೀಗೆಂದರು: "ಪ್ರಿಯೆ! ನಿನ್ನ ತಂದೆ ಅಬ್ದುಲ್ ಮಲಿಕ್ ಈ ಮುತ್ತು ರತ್ನಗಳನ್ನು ನನಗಾಗಿ

ಎಲ್ಲಿಂದ ಗಳಿಸಿರುವರೆಂದು ನಿನಗೆ ತಿಳಿದಿದೆಯಷ್ಟೇ. ಆದ್ದರಿಂದ ಅವೆಲ್ಲವನ್ನೂ ಒಂದು ಪೆಟ್ಟಿಗೆಯಲ್ಲಿ ಹಾಕಿ ನನಗೆ ಕೊಡು. ನಾನು ಅದನ್ನು ಸಾರ್ವಜನಿಕ ಬೊಕ್ಕಸಕ್ಕೆ ಒಪ್ಪಿಸುತ್ತೇನೆ. ಆದರೂ ನಾನು ನಿನ್ನ ಸರವನ್ನು ಮುಟ್ಟುವುದಿಲ್ಲ. ಇತರೆಲ್ಲ ವಸ್ತುಗಳನ್ನು ವ್ಯಯಿಸಿಯೂ ಜನರ ಬೇಡಿಕೆಗಳು ಪೂರೈಕೆಯಾಗದಿದ್ದರೆ ಕೊನೆಯ ಗಳಿಗೆಯಲ್ಲಿ ಮಾತ್ರ ಅದನ್ನು ಮಾರುತ್ತೇನೆ."

ಫಾತಿಮಾ ತಮ್ಮ ಅಮೂಲ್ಯವಾದ ವಸ್ತ್ರಾಭರಣ ಮತ್ತು ರತ್ನಾದಿಗಳನ್ನು ಖಲೀಫರಿಗೆ ಒಪ್ಪಿಸಿದರು. ಅವರು ಅದನ್ನು ಸಾರ್ವಜನಿಕ ಬೊಕ್ಕಸಕ್ಕೆ ಸೇರಿಸಿದರು. ಅದರಲ್ಲಿ ಆ ಅತ್ಯಮೂಲ್ಯ ಸರವೂ ಇತ್ತು. ಉಮರ್(ರ) ನಿಧನರಾಗುವಾಗಲೂ ಆ ಸರವು ಅಲ್ಲಿಯೇ ಇತ್ತು. ಅನಂತರ ಅಧಿಕಾರಕ್ಕೆ ಬಂದ ಫಾತಿಮಾರ ಸಹೋದರ ಯಝೀದ್ ಬಿನ್ ಅಬ್ದುಲ್ ಮಲಿಕ್ ಅದನ್ನು ಅವರಿಗೆ ಹಿಂತಿರುಗಿಸಿದರು. ಆದರೆ ಧರ್ಮಭಕ್ತೆಯಾದ ಆ ಮಹಿಳೆ ಹೀಗೆ ಹೇಳಿದ್ದರು:

"ಪತಿಯ ಜೀವನ ಕಾಲದಲ್ಲಿ ತೊರೆದುದನ್ನು ಮರಣದ ಬಳಿಕ ಸ್ವೀಕರಿಸಬೇಕೇ?"

ನಿರ್ಣಾಯಕ ಹಂತದಲ್ಲಿ ಸನ್ಮಾರ್ಗವನ್ನು ಆಯ್ದುಕೊಂಡಿದ್ದ ಫಾತಿಮಾ(ರ) ಇಂತಹ ಅನೇಕ ಉಜ್ವಲ ಮಾದರಿಗಳನ್ನು ಸೃಷ್ಟಿಸಿ ಹೋಗಿದ್ದಾರೆ. ಒಮ್ಮೆ ಪರ್ಶಿಯಾದ ಓರ್ವ ಮಹಿಳೆಯು ಖಲೀಫ ಉಮರ್ ಬಿನ್ ಅಬ್ದುಲ್ ಅಝೀಝ್‌ರನ್ನು ನೋಡಲು ಡೆಮಾಸ್ಕಸ್‌ಗೆ ಬಂದಳು. ದಾರಿಹೋಕರೊಡನೆ ಅವಳು ಖಲೀಫರ ಮನೆಯ ಗುರುತು ಕೇಳಿದಳು. ಜನರು ಆಕೆಗೆ ಸರಿಯಾದ ವಿವರವನ್ನು ನೀಡಿದರು. ಆದರೂ ಆಕೆ ಖಲೀಫರ ಮನೆಯನ್ನು ತುಂಬಾ ಹೊತ್ತು ಹುಡುಕುತ್ತಿದ್ದಳು. ಕೊನೆಗೊಬ್ಬರು, "ಓ ಅದೇ ಖಲೀಫರ ಮನೆ" ಎಂದು ಬೆಟ್ಟು ಮಾಡಿ ತೋರಿಸಿದರು.

ಆತನು ತೋರಿಸಿದೆಡೆಯಲ್ಲಿ ಒಂದು ಪುಟ್ಟ ಗುಡಿಸಲು ಮಾತ್ರ ಕಾಣಿಸಿತು. ಆಕೆಯು ಒಂದು ಭವ್ಯ ಅರಮನೆಯ ನಿರೀಕ್ಷೆಯಲ್ಲಿದ್ದಳು. ಆದ್ದರಿಂದ ಆಕೆಯು ದಾರಿ ಹೋಕನಿಗೆ ತನ್ನ ಪ್ರಶ್ನೆ ಅರ್ಥವಾಗಲಿಲ್ಲವೆಂದು ಭಾವಿಸಿ ಪುನಃ ಕೇಳಿದಳು:

"ನಾನು ನಿನ್ನೊಡನೆ ಖಲೀಫ ಉಮರ್ ಬಿನ್ ಅಬ್ದುಲ್ ಅಝೀಝ್‌ರ ಮನೆಯ ಬಗ್ಗೆ ವಿಚಾರಿಸಿದ್ದೆ."

ಆ ಮಹಿಳೆಯ ಸಂಶಯವನ್ನು ಅರ್ಥ ಮಾಡಿಕೊಂಡ ಆತ ಹೇಳಿದ.

"ಹೌದು, ಅದುವೇ ಖಲೀಫ ಉಮರ್ ಬಿನ್ ಅಬ್ದುಲ್ ಅಝೀಝ್‌ರ ವಾಸಸ್ಥಳ."

ಆಕೆ ಆಶ್ಚರ್ಯ ಚಕಿತಳಾದಳು. ತನ್ನ ಕಲ್ಪನೆ ತಪ್ಪಿದೆಯೆಂದು ಆಕೆಗೆ ಮನವರಿಕೆಯಾಯಿತು. ಇಲ್ಲಿ ತಾನು ಭಾವಿಸಿರುವಂತಹ ಯಾವ ರಾಜಧಾನಿಯೂ ಇಲ್ಲ. ಪರ್ಶಿಯನ್ ಚಕ್ರವರ್ತಿಗಳ ವೈಭೋಗವು ಕಾಣಿಸುತ್ತಿಲ್ಲ. ಕೇವಲ ಸೋಗೆ ಹಾಸಿದ ಒಂದು ಗುಡಿಸಲು.

ಆಕೆ ಖಲೀಫರ ಮನೆಗೆ ಹೋದಳು. ಬಾಗಿಲ ಬಳಿ ತಲುಪಿದಾಗ ಅನುಮತಿ ಕೇಳಿ ಒಳಗೆ ಹೋದಳು ಅಲ್ಲಿನ ದೃಶ್ಯವನ್ನು ನೋಡಿ ಆಕೆ ದಿಗಿಲುಗೊಂಡಳು. ಒಬ್ಬರು ಗೋಡೆ ಸಾರಿಸಿ ಶುಚಿಗೊಳಿಸುತ್ತಿದ್ದರು. ಓರ್ವ ಮಹಿಳೆಯು ಬಳಿಯಲ್ಲಿ ನಿಂತು ಅವರಿಗೆ ಬೇಕಾದ ಸಾಮಗ್ರಿಗಳನ್ನು ಎತ್ತಿ ಕೊಡುತ್ತಿದ್ದರು.

"ಅಮೀರುಲ್ ಮೂಮಿನೀನ್ ಉಮರ್ ಬಿನ್ ಅಬ್ದುಲ್ ಅಝೀಝ್ ಎಲ್ಲಿದ್ದಾರೆ?" ಆಕೆ ಅಚ್ಚರಿಯಿಂದ ಕೇಳಿದಳು.

"ನೀವು ಕೇಳಿದ ವ್ಯಕ್ತಿ ನಾನೇ" ಗೋಡೆ ಸಾರಿಸುತ್ತಿದ್ದ ವ್ಯಕ್ತಿ ಹೇಳಿತು.

"ಹಾಗಾದರೆ ಅಮೀರುಲ್ ಮೂಮಿನೀನ್‌ರ ಬಳಿ ಕೆಲಸ ಮಾಡುವ ಸ್ತ್ರೀಯು ಪರ್ದಾ ಧರಿಸಿಲ್ಲವೇಕೆ?" ಆಕೆ ಪ್ರಶ್ನಿಸಿದಳು.

"ಇದು ಕೆಲಸದಾಕೆಯಲ್ಲ, ನನ್ನ ಪತ್ನಿ ಫಾತಿಮಾ" ಉಮರ್ ಬಿನ್ ಅಬ್ದುಲ್ ಅಝೀಝ್ ಸ್ಪಷ್ಟಪಡಿಸಿದರು. ಇದರಿಂದ ಪರ್ಶಿಯನ್ ಮಹಿಳೆಯ ಅಚ್ಚರಿ ಇಮ್ಮಡಿಯಾಯಿತು. ಆಕೆ ನಿಬ್ಬೆರಗಾಗಿ ನಿಂತಳು. ಸಿಂಧ್‌ನಿಂದ ಫ್ರಾನ್ಸ್ ತನಕ ವ್ಯಾಪಿಸಿದ್ದ ಇಸ್ಲಾಮೀ ರಾಷ್ಟ್ರದ ಸಾರಥಿ ಜನಸಾಮಾನ್ಯರಂತಹ ಕಠಿಣ ಕೆಲಸಗಳನ್ನು ಮಾಡುವುದೇ? ಪತ್ನಿಯು ಓರ್ವ ಕೂಲಿಯಾಳಿನಂತೆ ದುಡಿಯುವುದೇ? ಸಾಮಾನ್ಯ ಶ್ರೀಮಂತರೂ ಇಂತಹ ಕೆಲಸಗಳನ್ನು ಮಾಡುವುದಿಲ್ಲ. ಹಾಗಿದ್ದರೂ ಇಬ್ಬರೂ ಸಂತುಷ್ಟರಾಗಿದ್ದಾರೆ. ಅವರ ನಗುಮುಖದಲ್ಲಿ ಆಯಾಸದ ಸುಳಿವೂ ಕಾಣುವುದಿಲ್ಲ.

ಉಮರ್ ಬಿನ್ ಅಬ್ದುಲ್ ಅಝೀಝ್‌ರ ಜತೆಗೆ ಕೆಲಸ ಮಾಡುತ್ತಿರುವ ಪ್ರಿಯ ಪತ್ನಿ ಫಾತಿಮಾರ ತಂದೆ ಮತ್ತು ಸಹೋದರರೆಲ್ಲರೂ ಆಡಳಿತಗಾರರಾಗಿದ್ದರೆಂದು ತಿಳಿದ ಬಳಿಕವಂತೂ ಪರ್ಶಿಯನ್ ಮಹಿಳೆಯು ಆಶ್ಚರ್ಯದಿಂದ ಕಂಗಾಲಾಗಿ ಬಿಟ್ಟಿದ್ದರು. ಆಕೆಯು ಮೂಕವಿಸ್ಮಿತಳಾಗಿ "ಇಂತಹ ಮಹಿಳೆಯರೂ ಇರುತ್ತಾರೆಯೇ?" ಎಂದು ಉದ್ಗರಿಸಿದಳು. ಆ ಪ್ರಶ್ನೆ ಇಂದಿಗೂ ಮಾರ್ದನಿಸುತ್ತದೆ. ಏಕೆಂದರೆ ದ್ವಿತೀಯ ಉಮರ್‌ರ ಪತ್ನಿ ಫಾತಿಮಾರ ಬಳಿಕ ಅಂತಹ ಮಹಿಳೆಯನ್ನು ಈ ಜಗತ್ತು ಕಂಡಿಲ್ಲ. ಅಧಿಕಾರದ ಅರಮನೆಯಲ್ಲಿ ಹುಟ್ಟಿ, ಬೆಳೆದು, ವಿಶಾಲ ಸಾಮ್ರಾಜ್ಯವೊಂದರ ಆಡಳಿತಗಾರನ ಪತ್ನಿಯಾಗಿದ್ದು ಓರ್ವ ಸಾಮಾನ್ಯ ಕೂಲಿಯಾಳಿನಂತೆ ಜೀವನ ಸಾಗಿಸಿದ ಫಾತಿಮಾ ಮಾನವೇತಿಹಾಸದಲ್ಲಿ ಅದ್ವಿತೀಯವಾಗಿ ಉಳಿದಿದ್ದಾರೆ. ಅವರ ಔನ್ನತ್ಯವು ಎಲ್ಲ ತಲೆಮಾರುಗಳ ಮಹಿಳಾ ಸಮೂಹಕ್ಕೆ ಸ್ಫೂರ್ತಿದಾಯಕ ಮತ್ತು ಮಾರ್ಗದರ್ಶಿಯಾಗಿದೆ.

---

# ಪ್ರಸಿದ್ಧ ವಿವಾಹ

"ನಿಮ್ಮ ಪುತ್ರಿಯನ್ನು ಖಲೀಫ ಅಬ್ದುಲ್ ಮಲಿಕ್ ಅವರು ತಮ್ಮ ಉತ್ತರಾಧಿಕಾರಿಯಾಗಿರುವ ಪುತ್ರ ವಲೀದ್‌ನಿಗೆ ವಿವಾಹ ಮಾಡಿಸಬೇಕೆಂದು ಬಯಸಿದ್ದಾರೆ." ಯಾವ ತಂದೆಯನ್ನಾದರೂ ಹರ್ಷ ಪುಳಕಿತಗೊಳಿಸಬೇಕಾಗಿದ್ದ ಈ ಮಾತುಗಳು ಸಈದ್ ಬಿನ್ ಮುಸಯ್ಯಿಬ್‌ರನ್ನು ಕುಪಿತಗೊಳಿಸಿತು. ಅವರು ಆ ಕಾಲದ ಸುಪ್ರಸಿದ್ಧ ವಿದ್ವಾಂಸರಾಗಿದ್ದರು. ಇತರ ಸಾಮಾನ್ಯ ವಿದ್ವಾಂಸರಂತೆ ಹಣ ಮತ್ತು ಅಧಿಕಾರಕ್ಕೆ ಅವರು ತಲೆ ಬಾಗುವವರಾಗಿರಲಿಲ್ಲ.

ಅಮವಿ ಆಡಳಿತಗಾರ ಅಬ್ದುಲ್ ಮಲಿಕ್ ದುಷ್ಟ ಮತ್ತು ದುರಂಹಕಾರಿಯಾಗಿದ್ದರು. ತನ್ನ ಮರಣದ ಬಳಿಕ ಅಧಿಕಾರವು ಇತರರ ಕೈ ಸೇರಬಾರದು. ಅದು ತನ್ನ ಮಕ್ಕಳಿಗೆ ದೊರೆಯಬೇಕೆಂದು ಅವರು ನಿರ್ಧರಿಸಿದ್ದರು. ಆದ್ದರಿಂದ ತಮ್ಮ ಜೀವನಾವಧಿಯಲ್ಲಿಯೇ ಪುತ್ರ ವಲೀದ್‌ರನ್ನು ಮುಂದಿನ ಆಡಳಿತಗಾರನೆಂದು ಘೋಷಿಸಿ ಅದಕ್ಕೆ ಜನರ ಮನ್ನಣೆ ದೊರಕಿಸಲಿಕ್ಕಾಗಿ ಪ್ರಯತ್ನಿಸಿದರು. ಜನಸಾಮಾನ್ಯರು ಅಬ್ದುಲ್ ಮಲಿಕ್‌ರ ಆಜ್ಞೆಗೆ ವಿಧೇಯರಾಗಿ ಪುತ್ರ ವಲೀದ್‌ರನ್ನು ಅನುಸರಿಸುವ ಪ್ರತಿಜ್ಞೆ ಮಾಡುತ್ತಿದ್ದರು. ಆದರೆ ಘನ ವಿದ್ವಾಂಸ ಸಈದ್ ಬಿನ್ ಮುಸಯ್ಯಿಬ್ ಈ ಕುತಂತ್ರಕ್ಕೆ ಸಮ್ಮತಿಸಲಿಲ್ಲ. ಆಡಳಿತಗಾರನ ಈ ಕುಪ್ರಯತ್ನವನ್ನು ಬಲವಾಗಿ ಖಂಡಿಸಿದರು. ಇದು ಅಬ್ದುಲ್ ಮಲಿಕ್‌ರಿಗೆ ದೊಡ್ಡ ತೊಡಕಾಯಿತು. ಆದ್ದರಿಂದ ಅದರ ನಿವಾರಣೆಗಾಗಿ ಅಬ್ದುಲ್ ಮಲಿಕ್‌ರು ತನ್ನ ಉತ್ತರಾಧಿಕಾರಿಯಾಗಲಿರುವ ಪುತ್ರ ವಲೀದ್‌ನಿಗೆ ಸಈದ್ ಬಿನ್ ಮುಸಯ್ಯಿಬ್‌ರ ಪುತ್ರಿಯನ್ನು ವಿವಾಹ ಮಾಡಿಸುವ ಉಪಾಯವನ್ನು ಹೂಡಿದ್ದರು. ಭಾವೀ ಆಡಳಿತಗಾರನು ಅಳಿಯನಾಗಿ ದೊರೆತರೆ ಸಈದ್‌ರು ಸಂತುಷ್ಟರಾಗಿ ನನ್ನ ಇಚ್ಛೆಗೆ ಬದ್ಧರಾಗಬಹುದೆಂದು ಅವರು ಭಾವಿಸಿದ್ದರು. ಆದರೆ ಸಈದ್ ಬಿನ್ ಮುಸಯ್ಯಿಬ್(ರ) ಹಣ ಮತ್ತು ಅಧಿಕಾರಕ್ಕೆ ತಲೆ ಬಾಗುವ ವ್ಯಕ್ತಿಯಾಗಿರಲಿಲ್ಲ. ಅವರು ಪಾಂಡಿತ್ಯದ ಪಾವಿತ್ರ್ಯವನ್ನು ಕಾಯ್ದುಕೊಂಡರು. ಆದ್ದರಿಂದ ಅನಿರೀಕ್ಷಿತವಾಗಿ ಅವರು ಅಬ್ದುಲ್ ಮಲಿಕ್‌ರ ಬಯಕೆಯನ್ನು ತಿರಸ್ಕರಿಸಿದರು. ಸಾಮಾನ್ಯ ಸ್ಥಿತಿಯಲ್ಲಿ ಖಲೀಫರ ಪುತ್ರನು ಓರ್ವ ಬಡ ವಿದ್ವಾಂಸನ ಪುತ್ರಿಯನ್ನು ವಿವಾಹವಾಗುವುದನ್ನು ಊಹಿಸಲೂ ಸಾಧ್ಯವಿರಲಿಲ್ಲ. ಆದರೂ ವಿವಾಹ ಪ್ರಸ್ತಾಪಕ್ಕೆ ಬಂದ ಸೇವಕರೊಡನೆ ಹೀಗೆಂದರು: "ಅದು ಸಾಧ್ಯವಿಲ್ಲವೆಂದು ಖಲೀಫರಿಗೆ ತಿಳಿಸಿರಿ."

ಹೀಗೆ ಖಲೀಫರ ಪುತ್ರನಿಗೆ ತನ್ನ ಮಗಳನ್ನು ವಿವಾಹ ಮಾಡಿಸಿ ಕೊಡುವ ಉತ್ತಮ ಅವಕಾಶವನ್ನು ಸಂತೋಷದಿಂದ ತಿರಸ್ಕರಿಸಿದ ಸಈದ್ ಬಿನ್ ಮುಸಯ್ಯಿಬ್(ರ) ಅನಂತರ ಆಕೆಯನ್ನು ತನ್ನ ಓರ್ವ ಶಿಷ್ಯನಿಗೆ ವಿವಾಹ ಮಾಡಿ ಕೊಟ್ಟರು. ಅಬ್ದುಲ್ಲಾ ಬಿನ್ ವದಾಲ್ ಎಂಬ ಆ ಶಿಷ್ಯ ತೀರಾ ಬಡವರಾಗಿದ್ದರು. ಅವರು ಆ ವಿವಾಹದ ಘಟನೆಯನ್ನು ಹೀಗೆ ವಿವರಿಸಿದ್ದಾರೆ:

ನಾನು ಯಾವಾಗಲೂ ಸಈದ್ ಬಿನ್ ಮುಸಯ್ಯಿಬ್‌ರ ಪ್ರವಚನ ತರಗತಿಯಲ್ಲಿ ಭಾಗವಹಿಸುತ್ತಿದ್ದೆ. ಹೀಗಿರಲು ಸ್ವಲ್ಪ ಕಾಲ ನನಗೆ ಅಲ್ಲಿಗೆ ಹೋಗಲಾಗಲಿಲ್ಲ. ಅನಂತರ ಕೆಲ ದಿನಗಳ ಬಳಿಕ ಅಲ್ಲಿಗೆ ಹೋದಾಗ ಅವರು ಆಶ್ಚರ್ಯದಿಂದ ನನ್ನ ಗೈರು ಹಾಜರಿಯ ಕಾರಣವನ್ನು ಕೇಳಿದರು. ನಾನು ಹೇಳಿದೆ;

"ನನ್ನ ಪತ್ನಿ ಕೆಲವು ದಿನಗಳ ಹಿಂದೆ ತೀರಿಕೊಂಡಳು, ಆದ್ದರಿಂದ ನನಗೆ ಇಲ್ಲಿಗೆ ಬರಲಾಗಲಿಲ್ಲ."

ಸ್ವಲ್ಪ ಹೊತ್ತು ಮೌನವಾಗಿದ್ದ ಬಳಿಕ ಅವರು ನನ್ನೊಡನೆ ಕೇಳಿದರು:

"ನಿಮಗೆ ಪುನಃ ವಿವಾಹವಾಗುವ ಇಚ್ಛೆಯಿದೆಯೇ?"

"ಅಲ್ಲಾಹ್ ಅನುಗ್ರಹಿಸಿದರೆ ನೋಡೋಣ! ಆದರೆ ನನ್ನಂತಹ ಬಡವರಿಗೆ ಯಾರು ತಾನೇ ಹೆಣ್ಣು ಕೊಡುತ್ತಾರೆ?" ಎಂದು ನಾನು ಹೇಳಿದೆ.

"ನಿಮಗೆ ಒಪ್ಪಿಗೆಯಾದರೆ ನಾನು ನನ್ನ ಮಗಳನ್ನೇ ವಿವಾಹ ಮಾಡಿಸಿ ಕೊಡುತ್ತೇನೆ" ಸಈದ್ ಬಿನ್ ಮುಸಯ್ಯಿಬ್ ಹೇಳಿದರು. ಆ ಮಾತುಗಳನ್ನು ನನಗೆ ನಂಬಲಾಗಲಿಲ್ಲ. ನನ್ನ ದಿಗಿಲು ಸ್ವಲ್ಪ ಇಳಿದ ಬಳಿಕ ನಾನು ಹೇಳಿದೆ,

"ನಿಮ್ಮ ಮಗಳ ಪತಿಯಾಗುವುದಕ್ಕಿಂತ ದೊಡ್ಡ ಭಾಗ್ಯ ನನಗೆ ಬೇರೇನು ದೊರೆತೀತು?" ಆ ಕೂಡಲೇ ಅವರು ನನ್ನ ಕೈ ಹಿಡಿದು ಎರಡು ದಿರ್ಹಮ್ ಮಹ್ರ್ ನಿರ್ಣಯಿಸಿ ಅವರ ಪುತ್ರಿಯನ್ನು ನನಗೆ ವಿವಾಹ ಮಾಡಿಕೊಟ್ಟರು.

ಅನಂತರ ನಾನು ಮನೆಗೆ ಮರಳಿದೆ. ಅಂದು ನಾನು ಉಪವಾಸ ವ್ರತ ಆಚರಿಸಿದ್ದೆ. ನನ್ನ ಮನಸ್ಸು ಸಂತೋಷದಿಂದ ಕುಣಿಯುತ್ತಿತ್ತು. ನಡೆದ ಘಟನೆಯು ನನಗೆ ಕನಸಿನಂತೆ ಭಾಸವಾಯಿತು. ಸೂರ್ಯಾಸ್ತಮಾನದ ಬಳಿಕ ಪ್ರಾರ್ಥನೆ ಮುಗಿಸಿ ಎರಡು ಮೂರು ಚಪಾತಿ ಮಾಡಿ ಉಪವಾಸ ತೊರೆಯಲು ಆರಂಭಿಸಿದ್ದೆ. ಅಷ್ಟರಲ್ಲಿ ಕದ ತಟ್ಟುವ ಸದ್ದು ಕೇಳಿಸಿತು.

'ಯಾರು?'

ಎಂದು ಕೇಳಿದಾಗ, ಕೇವಲ

'ಸಈದ್'

ಎಂಬ ಉತ್ತರ ಬಂತು. ಅದು ಸಈದ್ ಬಿನ್ ಮುಸಯ್ಯಿಬ್‌ರೆಂದು ನಾನು ಭಾವಿಸಿರಲಿಲ್ಲ. ಏಕೆಂದರೆ ಅವರು ಕಳೆದ 40 ವರ್ಷಗಳಲ್ಲಿ ಮಸೀದಿಗೆ ಹೊರತು ಬೇರೆಲ್ಲಿಗೂ ಹೋಗಿರಲಿಲ್ಲವೆಂದು ನನಗೆ ತಿಳಿದಿತ್ತು. ನಾನು ಬಾಗಿಲು ತೆರೆದಾಗ ಸಈದ್ ಬಿನ್ ಮುಸಯ್ಯಿಬ್‌ರೇ ಅಲ್ಲಿ ನಿಂತಿದ್ದರು. ಅವರ ಅನಿರೀಕ್ಷಿತ ಆಗಮನ ದಿಂದ ನನಗೆ ಅತ್ಯಾಶ್ಚರ್ಯವಾಯಿತು. ನಾನು ತಕ್ಷಣ ಕೇಳಿದೆ:

"ನೀವು ಕಷ್ಟದಲ್ಲಿ ಇಲ್ಲಿಗೆ ಯಾಕೆ ಬಂದಿರಿ? ಏನಾದರೂ ಅಗತ್ಯವಿದ್ದರೆ ಹೇಳಿ ಕಳುಹಿಸಿದರೆ ನಾನೇ ಬರುತ್ತಿದ್ದೆನಲ್ಲಾ."

"ವಿಶೇಷವೇನೂ ಇಲ್ಲ. ನೀವು ಇಲ್ಲಿ ಒಂಟಿಯಾಗಿರಬಹುದೆಂದು ಭಾವಿಸಿ ಬಂದೆ. ಈಗ ನಿಮಗೆ ಪತ್ನಿಯಿದ್ದಾಳಲ್ಲವೇ. ಇನ್ನು ಒಂಟಿಯಾಗಿರುವುದು ಸರಿಯಲ್ಲ. ಆದ್ದರಿಂದ ಇದೋ ನಿಮ್ಮ ಪತ್ನಿಯನ್ನು ಕರೆ ತಂದಿದ್ದೇನೆ. ನಿಮ್ಮ ಜೀವನವನ್ನು ಅಲ್ಲಾಹನು ಆನಂದಮಯಗೊಳಿಸಲಿ...." ಸಈದ್ ಅವರು ಈ ಮಾತುಗಳನ್ನು ಹೇಳಿ ಮುಗಿಸಿದಾಗ ಪತ್ನಿಯು ಒಳಗೆ ಪ್ರವೇಶಿಸಿದಳು.

ಭಾವೀ ಆಡಳಿತಗಾರನನ್ನು ವರಿಸುವ ಅವಕಾಶವನ್ನು ತಂದೆಯವರು ತಪ್ಪಿಸಿ ದ್ದಕ್ಕಾಗಿ ಆ ಪುತ್ರಿಗೆ ಸ್ವಲ್ಪವೂ ದುಃಖವಿರಲಿಲ್ಲ. ಬದಲಾಗಿ ಧರ್ಮನಿಷ್ಠನಾದ ಅಬ್ದುಲ್ಲಾ ಬಿನ್ ವದಾಲ್ ವರನಾಗಿ ದೊರೆತುದು ಆಕೆಯನ್ನು ಸಂತುಷ್ಟಗೊಳಿಸಿತ್ತು.

ಅಳಿಯಂದಿರ ಹಣ, ಸ್ಥಾನಮಾನಗಳನ್ನು ಹೊಗಳಿ ಮೆರೆಯಲಿಕ್ಕಾಗಿ ಶ್ರೀಮಂತ ಹುಡುಗನನ್ನೇ ಹುಡುಕಾಡುವ ತಂದೆತಾಯಿಗಳೇ ಅಧಿಕವಿರುವ ಸಮುದಾಯದಲ್ಲಿ, ಸಈದ್ ಬಿನ್ ಮುಸಯ್ಯಿಬ್‌ರಂತೆ ತತ್ವನಿಷ್ಠೆ ಮತ್ತು ಗುಣನಡತೆಗೆ ಗಮನ ನೀಡುವವರು ಕಡಿಮೆ. ಆದ್ದರಿಂದಲೇ ಅವರ ಮಗಳ ವಿವಾಹವು ಇತಿಹಾಸದಲ್ಲೇ ಪ್ರಸಿದ್ಧವಾಯಿತು.

---

# ತೈಮೂರನ ಪಶ್ಚಾತ್ತಾಪ

ಇಸ್ಲಾಮೀ ರಾಷ್ಟ್ರಗಳಿಗೆ ನುಗ್ಗಿದ ತಾರ್ತಾರಿಗಳು ಕ್ರೂರ ಹಿಂಸಾಚಾರ ಮತ್ತು ಕೊಲೆ ಪಾತಕಗಳನ್ನು ನಡೆಸಿದರು. ಚೆಂಗೀಝ್ ಖಾನ್‌ನ ವಂಶದವನಾದ ತೈಮೂರ್ ಎಂಬಾತನು ಅವರ ಸೇನಾನಿಯಾಗಿದ್ದ. ಸೋವಿಯತ್ ರಶ್ಯಾದಲ್ಲಿದ್ದ ಸಮರ್ಖಂಡ್ ನಗರವು ಆತನ ರಾಜಧಾನಿಯಾಗಿತ್ತು. ಒರಟು ಸ್ವಭಾವದ ತಾರ್ತಾರಿಗಳು ಇಸ್ಲಾಮ್ ಸ್ವೀಕರಿಸಿದ್ದರೂ ಹಳೆಯ ಆಚಾರ-ಸಂಪ್ರದಾಯ ಮತ್ತು ರೀತಿ-ರಿವಾಜುಗಳನ್ನು ಸಂಪೂರ್ಣ ತೊರೆದಿರಲಿಲ್ಲ. ಮಂಗೋಲಿಯನ್ ಸಂಸ್ಕೃತಿಯ ವೈಶಿಷ್ಟ್ಯ ಅವರಲ್ಲಿ ಎದ್ದು ತೋರುತ್ತಿತ್ತು.

1383ರಲ್ಲಿ ಪರ್ಶಿಯಾಕ್ಕೆ ಪ್ರವೇಶಿಸಿದ ತೈಮೂರ್ ಎರಡು ವರ್ಷಗಳಲ್ಲಿ ಅದರ ಪೂರ್ವ ಭಾಗಗಳನ್ನು ಸ್ವಾಧೀನ ಪಡಿಸಿದನು. ತರುವಾಯ ಇರಾಕ್, ಅಝುರ್; ಬೈಜಾನ್, ಆರ್ಮೇನಿಯು, ಮೆಸಪಟೋಮಿಯ ಮುಂತಾದ ಪ್ರದೇಶಗಳನ್ನು ಗೆದ್ದುಕೊಂಡನು. ತೈಮೂರ್‌ನ ಸಾಮ್ರಾಜ್ಯವು ಪೂರ್ವ ದೆಹಲಿ ತನಕ ವ್ಯಾಪಿಸಿತ್ತು. ಸೋತ ರಾಷ್ಟ್ರಗಳ ಜನರನ್ನು ತಾರ್ತಾರಿಗಳು ನಿರ್ದಾಕ್ಷಿಣ್ಯವಾಗಿ ಕೊಲ್ಲುತ್ತಿದ್ದರು.

1401ರಲ್ಲಿ ತೈಮೂರ್ ಬಾಗ್ದಾದ್ ವಶಪಡಿಸಿಕೊಂಡನು. ಈಜಿಪ್ಟ್‌ನ ಸುಲ್ತಾನ್ ಕೂಡಾ ಆತನಿಗೆ ಶರಣಾದನು. ಹೀಗೆ ಭಾರೀ ಯಶಸ್ಸಿನಿಂದ ಮುನ್ನಡೆಯುತ್ತಿದ್ದ ತೈಮೂರ್‌ನ ಸೇನೆಯು ಟರ್ಕಿ ಗಡಿಗೆ ತಲುಪಿತು. ಅಂದು ಅಲ್ಲಿ ಬಯಾಸೀದ್ ರಾಜನು ಆಳುತ್ತಿದ್ದನು. ಆತನು ಜನರನ್ನು ಯುದ್ಧಕ್ಕೆ ಸಜ್ಜುಗೊಳಿಸಿ ತಾರ್ತಾರಿಗಳನ್ನು ಎದುರಿಸಿದನು. ಟರ್ಕಿಗಳು ತೈಮೂರ್‌ನ ಸೇನೆಯ ವಿರುದ್ಧ ತೀವ್ರವಾಗಿ ಹೋರಾಡಿದರು. ಆದರೆ ನೆರೆಯ ಪ್ರವಾಹದಂತೆ ಧುಮುಕಿದ ವೈರಿಗಳನ್ನು ತಡೆಯಲು ಅವರಿಗೆ ಸಾಧ್ಯವಾಗಲಿಲ್ಲ. ಅನೇಕ ದಿನಗಳ ಹೋರಾಟದ ಬಳಿಕ ಅವರು ಸೋಲೊಪ್ಪಿಕೊಂಡರು. ಟರ್ಕಿಗೆ ಪ್ರವೇಶಿಸಿದ ತೈಮೂರ್‌ನ ಸೈನಿಕರು ಅಪಾರ ಜನರನ್ನು ನಿರ್ದಾಕ್ಷಿಣ್ಯವಾಗಿ ಕೊಂದರು. ಸಹಸ್ರಾರು ಮಂದಿಯನ್ನು ಬಂಧಿಸಿದರು. ಕೈದಿಗಳೆಲ್ಲರನ್ನೂ ಕೊಲ್ಲಲು ತೈಮೂರ್ ಆಜ್ಞಾಪಿಸಿದ್ದನು.

ತಾರ್ತಾರಿಗಳು ಬಂಧಿಸಿದ ಟರ್ಕಿ ಸೈನಿಕರಲ್ಲಿ ಹಮಿೂದಾ ಬಾನು ಕೂಡಾ ಇದ್ದಳು. ಆದರೂ ಅವರ ಗುರುತು ಯಾರಿಗೂ ಸಿಗಲಿಲ್ಲ. ಅವರು ಸಾಮಾನ್ಯ ಸೈನಿಕ ಸಮವಸ್ತ್ರ ಧರಿಸಿದ್ದರು.

ಅವರು ಮಹಿಳೆಯೆಂದು ತಿಳಿಯುತ್ತಿರಲಿಲ್ಲ. ಅವರು ಇತರ ಸೈನಿಕರ ಜೊತೆಗೂಡಿ ವೀರಾವೇಶದಿಂದ ಹೋರಾಡಿದರು. ಕೊನೆಗೆ ವೈರಿಗಳಿಗೆ ಸೆರೆಸಿಕ್ಕಿದ ಹಮಿೂದಾ ಬಾನುರವರು ತೈಮೂರ್‌ನ ಭೇಟಿಗೆ ಒಪ್ಪಿಗೆ ಕೇಳಿದರು. ಸುಂದರ ಹಾಗೂ ಸಭ್ಯನಂತೆ ಕಾಣುವ ಆ ಸೈನಿಕನ ಭೇಟಿಗೆ ತೈಮೂರ್ ಒಪ್ಪಿದನು.

ತೈಮೂರ್ ಚಿನ್ನದ ಸಿಂಹಾಸನದಲ್ಲಿ ಕುಳಿತಿದ್ದ. ಸುತ್ತಲೂ ಬೆಳೆಬಾಳುವ ರತ್ನ ಗಳನ್ನು ಹಾಸಲಾಗಿತ್ತು. ವಿಶೇಷ ಅಲಂಕಾರ ಮತ್ತು ಅಪೂರ್ವ ಆಡಂಬರ ವಸ್ತುಗಳು ಕಣ್ಣು ಕೋರೈಸುತ್ತಿದ್ದವು. ತೈಮೂರ್‌ನ ಸುತ್ತಲೂ ಶಸ್ತ್ರಧಾರಿಗಳಾದ ಅನೇಕ ಭಟರಿದ್ದರು. ಒಟ್ಟಿನಲ್ಲಿ ಎಂತಹ ವೀರರನ್ನೂ ದಿಗಿಲುಗೊಳಿಸುವ ವಾತಾವರಣವಿತ್ತು.

ಹಮಿೂದಾಬಾನುರನ್ನು ಬಂಧಿಸಿ ತೈಮೂರ್‌ನ ಮುಂದೆ ತರಲಾಯಿತು. ಆ ತನಕ ತೈಮೂರ್‌ನ ಮುಂದೆ ತಲೆ ಬಾಗದೆ ಯಾರೂ ನಿಂತಿರಲಿಲ್ಲ. ತಲೆತಗ್ಗಿಸದೆ ನಿಲ್ಲುವುದು ಆತನಿಗೆ ಸಹ್ಯವಾಗಿರಲಿಲ್ಲ. ಆದರೆ ತೈಮೂರ್‌ನ ಮುಂದೆ ತಂದು ನಿಲ್ಲಿಸಿದ ಹಮಿೂದಾಬಾನು ಎಂಬ ಕೈದಿಯ ತಲೆ ಕಿಂಚಿತ್ತೂ ಬಾಗಿರಲಿಲ್ಲ. ಮುಖದಲ್ಲಿ ಭಯಭೀತಿ

ಅಥವಾ ದುಃಖದ ಛಾಯೆ ಕಂಡು ಬರುತ್ತಿರಲಿಲ್ಲ. ಅದು ತೈಮೂರ್‌ನನ್ನು ಅಚ್ಚರಿಗೊಳಿಸಿತು. ಹಮಿದಾಬಾನು ಆತನ ಮುಂದೆ ನಿಂತರು. ಮುಖ ನೋಡಿ ಮಾತಾಡುವ ಅನುಮತಿ ಕೋರಿದರು. ವಧಿಸಲ್ಪಡಲಿರುವ ಓರ್ವ ಸಾಮಾನ್ಯ ಸೈನಿಕನ ಈ ಹೊಸ ಬಗೆಯ ವರ್ತನೆಯಿಂದ ಬೆಚ್ಚಿದ ತೈಮೂರ್ ಅದಕ್ಕೆ ಒಪ್ಪಿಗೆ ನೀಡಿದನು.

ಹಮಿದಾಬಾನು ತಲೆಯಿತ್ತಿ ಧೀವಿಯಿಂದ ಹೇಳತೊಡಗಿದರು,

"ಚಕ್ರವರ್ತಿಗಳೇ! ನೀವು ವಿನಾ ಕಾರಣ ಮತ್ತು ಅಕ್ರಮವಾಗಿ ನಮ್ಮ ದೇಶವನ್ನು ಸ್ವಾಧೀನಪಡಿಸಿದ್ದೀರಿ. ನೀವು ಅನಗತ್ಯವಾಗಿ ಅಲ್ಲಾಹನ ಸಹಸ್ರಾರು ದಾಸರ ರಕ್ತವನ್ನು ಹರಿಸಿದ್ದೀರಿ. ಸಹಸ್ರಾರು ಮಕ್ಕಳನ್ನು ಅನಾಥಗೊಳಿಸಿದ್ದೀರಿ. ಅಸಂಖ್ಯಾತ ಮಹಿಳೆಯರನ್ನು ವಿಧವೆಯರನ್ನಾಗಿ ಮಾಡಿದ್ದೀರಿ. ಹೀಗೆ ಇಸ್ಲಾಮ್ ಮತ್ತು ಮುಸ್ಲಿಮರನ್ನು ಅಪಮಾನಗೊಳಿಸಿದ್ದೀರಿ. ಯಾಕಾಗಿ? ಕೇವಲ ನಿಮ್ಮ ದರ್ಪ ತೋರಿಸಲಿಕ್ಕಾಗಿ, ದೊಡ್ಡ ವೀರನೆಂದು ಜಂಬ ಕೊಚ್ಚಲಿಕ್ಕಾಗಿ! ಅದೂ ಸಾಲದೇ ಸಹಸ್ರಾರು ಮುಸ್ಲಿಮರನ್ನು ಬಂಧಿಸಿದ್ದೀರಿ. ಮುಂದಿನ ಕ್ಷಣದಲ್ಲಿ ನಿಮ್ಮ ಜನರು ಅವರನ್ನು ಕ್ರೂರವಾಗಿ ವಧಿಸಬಹುದು. ಆಗ ನಿಮಗೆ ಮತ್ತು ನಿಮ್ಮ ಜನರಿಗೆ ಸಂತೃಪ್ತಿಯಾಗುವುದು. ಬಡಪಾಯಿಗಳು ನರಳಿ ಸಾಯುವಾಗ ನೀವು ಕೇಕೆ ಹಾಕಿ ನಗುತ್ತೀರಿ! ಆದರೆ ಒಂದು ವಿಷಯ ನೆನಪಿರಲಿ. ನೀವು ಈಗ ನಮ್ಮನ್ನು ಕಳುಹಿಸುವ ಸ್ಥಳಕ್ಕೆ - ಪರಲೋಕಕ್ಕೆ - ಹೆಚ್ಚು ವಿಳಂಬವಿಲ್ಲದೇ ನೀವೂ ಬರುತ್ತೀರಿ. ಅಲ್ಲಿ ಬಲಶಾಲಿಗಳಲ್ಲಿ ಅತ್ಯಂತ ಬಲಶಾಲಿಯಾದವನನ್ನು ನೀವು ನೋಡುವಿರಿ. ಅಂದು ನಿಮ್ಮ ಬಳಿ ನಿಮ್ಮ ಅಂಗರಕ್ಷಕರಿರುವುದಿಲ್ಲ. ಬದಲಾಗಿ ನೀವು ಅಲ್ಲಾಹನ ಸೇನೆಯಿಂದ ಬಂಧಿತರಾಗಿರುತ್ತೀರಿ. ನಿರಪರಾಧಿಗಳನ್ನು ವಧಿಸುತ್ತಿರುವ ನಿಮ್ಮನ್ನೂ ಅಲ್ಲಿ ಕಡಿದು ಕೊಲ್ಲಲಾಗುವುದು. ಆದರೆ ಅಂದು ನೀವು ಸಾಯಲಾರಿರಿ. ನಿಮ್ಮ ಈ ಕ್ರೌರ್ಯಗಳನ್ನು ಅಂದು ನೀವು ಹೇಗೆ ತಾನೆ ಸಮರ್ಥಿಸಬಲ್ಲಿರಿ?"

ಈ ಮಾತುಗಳಿಂದ ತೈಮೂರ್ ದಿಗ್ಭ್ರಾಂತನಾದ. ಆ ಕೈದಿಯನ್ನು ಕೊಲ್ಲುವ ಆಜ್ಞೆ ದೊರೆಯುವುದೆಂದು ಅಂಗರಕ್ಷಕರು ಸಜ್ಜಾಗಿ ನಿಂತರು. ಸೂಜಿ ಬಿದ್ದರೂ ಕೇಳುವಂತಹ ಮೌನ ಎಲ್ಲೆಡೆ ವ್ಯಾಪಿಸಿತ್ತು. ತೈಮೂರನು ಪರಲೋಕದ ಬಗ್ಗೆ ಆಲೋಚಿಸತೊಡಗಿದ್ದ. ಆತನ ಅಂಗರಕ್ಷಕರು ಆ ಸುಂದರ ಕೈದಿಯನ್ನು ಮಹಾ ವಿದ್ರೋಹಿಯೆಂದು ಭಾವಿಸಿದ್ದರು.

ಅಚ್ಚರಿಯನ್ನು ಇಮ್ಮಡಿಗೊಳಿಸುವಂತೆ ಹಮಿದಾ ಬಾನು ತಮ್ಮ ಗಡ್ಡ ಮತ್ತು ಮೀಸೆಯನ್ನು ಕಿತ್ತೆಸೆದರು. ಮುಂಡಾಸನ್ನು ಬಿಚ್ಚಿದರು. ಆ ಸುಂದರ ಕೈದಿಯು ಓರ್ವ ಮಹಿಳೆಯೆಂದು ಅಲ್ಲಿದ್ದವರಿಗೆ ಆಗ ತಿಳಿಯಿತು. ಎಲ್ಲರೂ ಆಕೆಯನ್ನು ನೋಡಿ ನಾಚಿ ತಲೆ ತಗ್ಗಿಸಿದರು. ಈ ಸಂದರ್ಭವನ್ನು ಬಳಸಿ ಹಮಿದಾ ಬಾನು ಹೀಗೆಂದರು:

"ಚಕ್ರವರ್ತಿಗಳೇ! ನನ್ನನ್ನು ನೋಡಿರಿ! ನಾನೋರ್ವ ಮಹಿಳೆ! ಅಬಲೆ! ಬಹಳ ಅಸಹಾಯಕಳು! ನನ್ನಂತಹ ಸಹಸ್ರಾರು ಮಂದಿಯನ್ನು ನೀವು ಅನಾಥ ಮತ್ತು ವಿಧವೆಯರನ್ನಾಗಿ ಮಾಡಿದ್ದೀರಿ! ನಾವು ನಿಮ್ಮಂತಹ ಗಂಡಸರನ್ನು ಹೆರಬೇಕಾದವ ರೆಂಬುದನ್ನು ಜ್ಞಾಪಿಸಿರಿ."

ಹಮೀದಾ ಬಾನುರ ಮಾತುಗಳು ತೈಮೂರ್‌ನನ್ನು ತಲ್ಲಣಗೊಳಿಸಿತು. ಅದು ಆತನ ಮನಸ್ಸನ್ನು ಅಲ್ಲೋಲ ಕಲ್ಲೋಲಗೊಳಿಸಿತು. ಕರುಣೆಯ ಭಾವನೆಗಳನ್ನು ಬಡಿದೆಬ್ಬಿಸಿತು. ತೈಮೂರ್ ಆ ಕೂಡಲೇ ಎಲ್ಲ ಕೈದಿಗಳ ವಧೆ ಶಿಕ್ಷೆಯನ್ನು ರದ್ದುಗೊಳಿಸಿ ಬಿಡುಗಡೆ ಗೊಳಿಸುವಂತೆ ಆದೇಶಿಸಿದನು. ಹಮೀದಾ ಬಾನುರನ್ನು ಸ್ವತಂತ್ರಗೊಳಿಸಿದನು.

ಈ ಘಟನೆಯು ತೈಮೂರ್‌ನ ಮುಂದಿನ ಜೀವನದ ಮೇಲೆ ಭಾರೀ ಪರಿಣಾಮ ಬೀರಿತು. ಆತನ ಗುಣನಡತೆಗಳಲ್ಲಿ ಆಮೂಲಾಗ್ರ ಬದಲಾವಣೆಯುಂಟಾಯಿತು. ತನ್ನ ಮನಸ್ಸನ್ನು ಬದಲಾಯಿಸಿದ ಹಮೀದಾಬಾನುರನ್ನು ಕೆಲವೇ ಸಮಯದಲ್ಲಿ ಪತ್ನಿಯಾಗಿ ಸ್ವೀಕರಿಸಿದನು.

---

# ಅಮರಳಾದ ಸೋಫಿಯಾ

"ರಾಜರು ನಿನಗೆ ಸೂರ್ಯೋದಯದ ತನಕ ಆಲೋಚಿಸುವ ಸಮಾಯಾವಕಾಶ ನೀಡಿದ್ದಾರೆ. ನಾಳೆ ಬೆಳಿಗ್ಗೆ ಸ್ಪಷ್ಟ ಉತ್ತರ ನೀಡಬೇಕು. ನೀನು ಮತಾಂತರಗೊಂಡು ಪ್ರಾಣ ಉಳಿಸಿಕೊಳ್ಳಬಹುದು ಅಥವಾ ಮುಸ್ಲಿಮಳಾಗಿ ಮುಂದುವರಿಯಬಹುದು. ಆದರೆ ಅದಕ್ಕಾಗಿ ನೀನು ನಿನ್ನ ಮಗುವನ್ನು ಸ್ವಕರಗಳಿಂದ ಅಗ್ನಿಕುಂಡಕ್ಕೆ ಎಸೆಯಬೇಕಾದೀತು."

ಫರ್ಡಿನಾಂಡ್ ರಾಜನ ಆಜ್ಞೆಯು ಸೋಫಿಯಾಳ ಮನದಲ್ಲಿ ತುಂಬಿತ್ತು. ಆಕೆಯು ಗ್ರಾನೆಡಾ ನಗರದ ಮಧ್ಯಭಾಗದಲ್ಲಿರುವ ಭವ್ಯ ಅರಮನೆಯ ಸೆರೆಯಲ್ಲಿ ಬಂಧಿಯಾ ಗಿದ್ದಾಳೆ. ಕೊರ್ಡೋವಾ ಹಲವು ಶತಮಾನಗಳಿಂದ ಇಸ್ಲಾಮೀ ಸಂಸ್ಕೃತಿಯ ಕೇಂದ್ರ ವಾಗಿತ್ತು. 15ನೆಯ ಶತಮಾನದ ಕೊನೆಯಲ್ಲಿ ಅದು ಸ್ಪಾನಿಶ್ ಆಕ್ರಮಣಕಾರರ ವಶ ವಾಯಿತು. ಅಂತೆಯೇ ಸೋಫಿಯಾ ಸೆರೆಮನೆ ಸೇರಿದಳು. ವಿನಾಕಾರಣ ಸ್ವಾತಂತ್ರ್ಯ ನಿರಾಕರಿಸ ಲ್ಪಟ್ಟ ಅನೇಕ ಮಾನವರ ಜತೆ ಆಕೆಯೂ ಬಂಧಿಯಾಗಿದ್ದಳು. ಕಾಲುಗಳಿಗೆ ಕಬ್ಬಿಣದ ಸಂಕೋಲೆ, ದೇಹದಲ್ಲಿ ಛಡಿಯೇಟಿನ ಕಲೆ ಮತ್ತು ಸಲಾಕೆಯಿಂದ ತಿವಿದ ಗಾಯಗಳು.

ಸೋಫಿಯಾಳನ್ನು ಕೊನೆಯ ಕೋಣೆಯಲ್ಲಿ ಕೂಡಿಹಾಕಲಾಗಿತ್ತು. ಆಕೆಯು ತನ್ನ ಮಗುವನ್ನು ಎದೆಗಪ್ಪಿಕೊಂಡಿದ್ದಾಳೆ. ಮೈ ಕೊರೈಸುವ ಚಳಿಯಿಂದ ಆಕೆಯ ಕೈಕಾಲುಗಳು ನಡುಗುತ್ತಿದೆ. ಒಂಭತ್ತು ತಿಂಗಳ ಎಳೆಗೂಸು ಚೀರಿ ಅಳುತ್ತಿವೆ.

ಸೋಫಿಯಾಳ ಮನದಲ್ಲಿ ತಂದೆ ಮತ್ತು ಪತಿಯ ರೂಪಗಳು ಪದೇಪದೇ ಮೂಡಿ ಮಾಯವಾಗುತ್ತಿದ್ದವು. ಅವರು ಅನುಭವಿಸಿದ ಕ್ರೂರ ಹಿಂಸೆಗಳನ್ನು ನೆನೆದು ಹೃದಯ ತಲ್ಲಣಿಸಿತು. ತಂದೆ ಮತ್ತು ಪತಿಯನ್ನು ಕೊಂದ ದೃಶ್ಯವನ್ನು ಎಷ್ಟು ಪ್ರಯತ್ನಿಸಿದರೂ ಆಕೆಗೆ ಮರೆಯಲಾಗುತ್ತಿರಲಿಲ್ಲ. ತನಗರಿವಿಲ್ಲದೆಯೇ ಆಕೆಯ ನಯನಗಳು ತುಂಬಿದವು. ಗಂಟಲು ತಡವರಿಸಿತು. ಮನದಲ್ಲಿ ತೀವ್ರ ದುಃಖ ಮಡುಗಟ್ಟಿತು. ಪಕ್ಕನೆ ಆಕೆಗೆ ಮೂಡಲಿರುವ ಪ್ರಭಾತದ ನೆನಪಾಯಿತು. ಹೆಚ್ಚು ವೇಳೆಯಿಲ್ಲ. ಕೆಲವೇ ನಿಮಿಷಗಳಲ್ಲಿ ಬೆಳಗಾಗಲಿದೆ. ಅಷ್ಟರಲ್ಲಿ ನಾನು ತೀರ್ಮಾನಕ್ಕೆ ಬರಬೇಕು. ಒಂದೋ, ಸ್ವಕರಗಳಿಂದ ತನ್ನ ಹಸುಗೂಸನ್ನು ಪ್ರಜ್ವಲಿಸುವ ಅಗ್ನಿಕುಂಡಕ್ಕೆ ಎಸೆಯಬೇಕು. ಇಲ್ಲವೇ ಇಸ್ಲಾಮ್ ಧರ್ಮವನ್ನು ತೊರೆಯಬೇಕು. ಆಕೆ ಕಳವಳದಿಂದ ಚಿಂತಿಸಿದಳು. ಫರ್ಡಿನಾಂಡ್‌ನ ಭಟರು ಬರುವ ವೇಳೆಯಾಯಿತು. ಪಕ್ಕನೆ ಆಕೆಯು ತನ್ನ ಮುದ್ದು ಕೂಸನ್ನು ಬಾಚಿಕೊಂಡು ಹಣೆಯನ್ನು ಲೊಚಲೊಚನೆ ಚುಂಬಿಸಿದಳು. ಮಾತೃ ಹೃದಯದಲ್ಲಿ ಪ್ರೀತಿಯ ಬುಗ್ಗೆ ಚಿಮ್ಮಿತು.

ಆಕೆಯ ಮನದಲ್ಲಿ ಕ್ಷಣಕಾಲ ಹರ್ಝ್ರುತ್ ಆಸ್ಯಾರ(ರ) ಚಿತ್ರ ಮೂಡಿ ಬಂತು. ಅವರು ಫರೋವ ರಾಜವಂಶದ ದ್ವಿತೀಯ ರಮ್ಸಿಸ್‌ನ ಪತ್ನಿಯಾಗಿದ್ದರು. ಸನ್ಮಾರ್ಗವನ್ನು ಸ್ವೀಕರಿಸಿದ್ದಕ್ಕಾಗಿ ಕ್ರೂರ ಪತಿಯ ಕಠೋರ ಮರ್ದನಗಳನ್ನು ಸಹಿಸಿ ಇಸ್ಲಾಮಿನಲ್ಲಿ ಸ್ಥಿರವಾಗಿ ನಿಂತ ಮಾದರಿ ಮಹಿಳೆ. ಅವರು ನನ್ನೊಡನೆ ಹೀಗೆ ಪಿಸುಗುಟ್ಟುತ್ತಿರುವರೆಂದು ಸೋಫಿಯಾಳಿಗೆ ಭಾಸವಾಯಿತು. "ಪ್ರಿಯ ಸಹೋದರಿ, ಇದೊಂದು ಭೀಕರ ಪರೀಕ್ಷೆ ಯಾಗಿದೆ. ನಿನ್ನ ಪಾದವು ವಿಚಲಿತವಾಗಬಾರದು. ಸತ್ಯಧರ್ಮವನ್ನು ಕೈ ಬಿಡಬೇಡ. ತಂದೆ ಮತ್ತು ಗಂಡನ ಹಾದಿಯನ್ನು ಹಿಂಬಾಲಿಸು."

ಮುಂದಿನ ಕ್ಷಣದಲ್ಲಿ ಸುಮಯ್ಯಾರ ಕರ್ಣಾನಂದಕರ ಮಾತುಗಳು ಸೋಫಿಯಾಳ ಕಿವಿ ತಮ್ಮಟೆಗೆ ಅಪ್ಪಳಿಸಿತು. "ಪ್ರಿಯೆ! ನೀನು ನನ್ನನ್ನು ನೋಡು! ನಾನೆಷ್ಟು ಸುಂದರಿ ಯಾಗಿದ್ದೇನೆ. ಇತ್ತ ನೋಡು ನಾನಿರುವ ಉದ್ಯಾನ ಅದೆಷ್ಟು ಸುಂದರವಾಗಿದೆ. ಇದರ ಕಾಲುವೆಗಳ ಸೊಬಗೇನು? ಇಲ್ಲಿ ನೋಡು! ಇಂದು ನನ್ನ ದೇಹದಲ್ಲಿ ಅಬೂ ಹುದೈಫಾರ ಛಡಿಯೇಟಿನ ಗಾಯಗಳಿಲ್ಲ. ಅಬೂಜಹಲ್‌ನ ಹೊಡೆತದ ಕಲೆಗಳಿಲ್ಲ. ಬಿಸಿ ಮರಳಿನಲ್ಲಿ ಮಲಗಿ ಕರಟಿದ ಲಕ್ಷಣವಿಲ್ಲ. ಕುದಿಯುವ ನೀರಿನಲ್ಲಿ ಮಲಗಿ ಬೆಂದು ಕರಗಿದ ಗುರುತಿಲ್ಲ. ಫರ್ಡಿನಾಂಡ್ ನಿನ್ನನ್ನು ಗರಿಷ್ಠ ಪೀಡಿಸಲಿ, ಅವೆಲ್ಲವೂ ನಿನಗೆ ಇಲ್ಲಿಗೆ ಹಾರಿ ಬರುವ ರೆಕ್ಕೆಗಳಾಗದಿರಲಾರದು."

ತನ್ನ ಮಕ್ಕಳನ್ನು ಅಲ್ಲಾಹನ ಮಾರ್ಗದಲ್ಲಿ ಸ್ಥಿರಗೊಳಿಸಿದ ಅಸ್ಮಾರ ನಾದವನ್ನು ಸೋಫಿಯಾಳಿಗೆ ನಿರ್ಲಕ್ಷಿಸಲಾಗಲಿಲ್ಲ. "ಸಹೋದರಿ! ಇದು ನಿಜಕ್ಕೂ ಕಠಿಣ ಪರೀಕ್ಷೆ ಯಾಗಿದೆ. ನೀನು ನಿನ್ನ ಮಗುವನ್ನು ಕಳೆದುಕೊಳ್ಳಬೇಕಾದೀತು. ದೇವನು ನಿನಗೆ ದಯಪಾಲಿಸಿದ ಮುದ್ದು ಮಗುವನ್ನು ಬೆಂಕಿಗೆಸೆಯುವುದು ಅನಿವಾರ್ಯವಾದೀತು.

ನೆನಪಿರಲಿ! ನೀನು ನಿನ್ನ ಮಗುವನ್ನು ನಿನಗಿಂತ ಬಲಶಾಲಿ, ಕರುಣಾನಿಧಿ ಮತ್ತು ವಾತ್ಸಲ್ಯಮಯಿಯಾದ ಅಲ್ಲಾಹನ ವಶಕ್ಕೆ ಒಪ್ಪಿಸುತ್ತಿರುವೆ. ಆ ಮಗು ನಾಳೆ ಇನ್ನಷ್ಟು ಸುಂದರನಾಗಿ, ಸುರೂಪಿಯಾಗಿ, ಸಂತುಷ್ಟನಾಗಿ ಸ್ವರ್ಗದ ಬಾಗಿಲಲ್ಲಿ ನಿನ್ನನ್ನು ಸ್ವಾಗತಿಸಲಿಕ್ಕಾಗಿ ನಿರೀಕ್ಷಿಸುತ್ತಿರುತ್ತಾನೆ."

ಸೋಫಿಯಾಳ ಕೈಗಳು ಆಕಾಶದತ್ತ ಚಾಚಿದವು. ತುಟಿಗಳು ಚಲಿಸತೊಡಗಿದವು.

"ಓ ನನ್ನ ಪ್ರಭೂ! ನನಗೆ ಸಹಾಯ ನೀಡು. ನನಗೆ ತಾಳ್ಮೆಯನ್ನು ಕರುಣಿಸು. ಪ್ರಭಾತದ ಪರೀಕ್ಷೆಯಲ್ಲಿ ಜಯ ನೀಡು! ನನ್ನನ್ನು ಸತ್ಯದಲ್ಲಿ ಸ್ಥಿರಗೊಳಿಸು. ಮನಸ್ಸನ್ನು ಅಚಲಗೊಳಿಸು! ನಾನು ಇಂತಹ ಕಠಿಣ ಪರೀಕ್ಷೆಗೆ ಗುರಿಯಾಗಬೇಕಾದ ಪಾಪವನ್ನು ಮಾಡಿಲ್ಲವೆಂದು ನೀನು ಬಲ್ಲೆ."

ಕೋಣೆಯಲ್ಲಿ ಬೆಳಕು ಪಸರಿಸತೊಡಗಿದಾಗ ಸೋಫಿಯಾಳಿಗೆ ದೂರದಿಂದ ಹೆಜ್ಜೆ ಸಪ್ಪಳ ಕೇಳಿಸಿತು. ಅದು ಹತ್ತಿರವಾಗುತ್ತಾ ಬಂತು. ಈರ್ವರು ಪೊಲೀಸರು ಬಾಗಿಲು ತೆರೆದು ಒಳಬಂದರು. ಒಬ್ಬಾತ ಆಕೆಯ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡ. ಇನ್ನೊಬ್ಬ ಕಾಲಿನ ಸಂಕೋಲೆಯನ್ನು ಬಿಚ್ಚಿದ. ಅನಂತರ ಸೋಫಿಯಾಳನ್ನು ಕೋಣೆಯಿಂದ ಹೊರತಂದರು. ಏನೂ ತಿಳಿಯದ ಮುಗ್ಧ ಮಗು ಚಿಟಾರನೆ ಚೀರಿತು.

ಪೊಲೀಸರು ಆಕೆಯನ್ನು ಒಂದು ಮೈದಾನಕ್ಕೆ ಕರೆದೊಯ್ದರು. ಅಲ್ಲಿ ಒಂದೆಡೆ ಅಗ್ನಿಕುಂಡವು ಧಗಧಗನೆ ಉರಿಯುತ್ತಿತ್ತು. ಜನರು ಸುತ್ತಲೂ ನೆರೆದಿದ್ದರು. ಇನ್ನೊಂದೆಡೆ ರಾಜ ಮತ್ತು ಪರಿವಾರವು ಆಸೀನವಾಗಿತ್ತು. ಪೊಲೀಸರು ಸೋಫಿಯಾಳನ್ನು ಫರ್ಡಿನಾಂಡ್‌ನ ಮುಂದೆ ಹಾಜರು ಪಡಿಸಿದರು. ರಾಜರು ಸೋಫಿಯಾಳನ್ನು ನೋಡಿ,

"ಹೇಳು ನಿನ್ನ ತೀರ್ಮಾನವೇನಾಯಿತು?" ಎಂದು ಕೇಳಿದ. ಸೋಫಿಯಾ ಏನೂ ಮಾತಾಡದೇ ತಲೆತಗ್ಗಿಸಿ ನಿಂತಳು. ಇದರಿಂದ ರಾಜ ಕುಪಿತನಾದ. ಹೀನಾಯವಾಗಿ ಆತ ಅಬ್ಬರಿಸಿದ,

"ವಂಚಕಿ ಹೇಳು! ನಿನ್ನ ನಿರ್ಧಾರವೇನು? ಇಸ್ಲಾಮ್ ಧರ್ಮವನ್ನು ತೊರೆಯಲು ಸಿದ್ಧಳಿರುವೆಯಾ?"

"ಇಲ್ಲ, ಸರ್ವಥಾ ಸಾಧ್ಯವಿಲ್ಲ. ಏನೇ ಬಂದರೂ ನಾನು ಸತ್ಯಧರ್ಮವನ್ನು ತೊರೆಯಲಾರೆ. ಜೀವಂತವಾಗಿರುವಾಗಲೇ ನನ್ನ ಚರ್ಮ ಸುಲಿದರೂ ಸರಿ! ಇದು ನನ್ನ ದೃಢ ನಿರ್ಧಾರ. ನಿಮಗಿಷ್ಟ ಬಂದಂತೆ ಮಾಡಿ! ನೀವು ಬೇಕಿದ್ದರೆ ನನ್ನನ್ನು ಕೊಲ್ಲಿರಿ. ನಿಮ್ಮ ತೀರ್ಪು ಅಂತಿಮವೇನಲ್ಲ! ನಿಮ್ಮ ತೀರ್ಪು ಇಲ್ಲಿ ಮಾತ್ರ ನಡೆಯಬಹುದು. ಸೋಫಿಯಾ ದೃಢ ಸ್ವರದಿಂದ ಹೇಳಿದಳು. ಆಕೆಯ ದೇಹ ಬಳಲಿದ್ದರೂ ಮನಸ್ಸು ಗಟ್ಟಿಯಾಗಿತ್ತು."

ರಾಜಾಜ್ಞೆಯಂತೆ ಪೊಲೀಸರು ಸೋಫಿಯಾಳ ಮಗುವನ್ನು ತಂದರು. ತನ್ನ ಕರುಳ ಕುಡಿಯನ್ನು ಕಂಡ ಮಾತೃ ಹೃದಯ ಚಡಪಡಿಸಿತು. ಆಕೆಯ ಕಣ್ಣುಗಳು ಹನಿಗೂಡಿದವು. ಈ ಮಾತೃ ವಾತ್ಸಲ್ಯದ ದುರ್ಲಾಭ ಪಡೆಯುವ ಉದ್ದೇಶದಿಂದ ಫರ್ಡಿನಾಂಡ್ ಹೇಳಿದ, "ಸೋಫಿಯಾ! ಇದೋ ನಿನಗೆ ಇನ್ನೊಂದು ಅವಕಾಶವನ್ನು ನೀಡುತ್ತಿದ್ದೇನೆ. ನಿನಗೆ ನಿನ್ನ ಈ ಮಗುವನ್ನು ಉಳಿಸಬೇಕೆಂದಿದ್ದರೆ ನನ್ನ ಮಾತು ಕೇಳು. ಹಠ ಮಾಡಬೇಡ. ನಮ್ಮ ಧರ್ಮಕ್ಕೆ ಬಾ. ಇಲ್ಲದಿದ್ದರೆ ಈ ಮಗುವನ್ನು ಅಗ್ನಿಕುಂಡಕ್ಕೆ ಎಸೆಯಬೇಕಾದೀತು!"

"ನನಗೆ ಇಂತಹ ಹತ್ತು ಮಕ್ಕಳಿದ್ದರೂ ಅವರೆಲ್ಲರನ್ನೂ ನನ್ನ ವಿಶ್ವಾಸ ದರ್ಶನಗಳಿಗಾಗಿ ಬಲಿಯರ್ಪಿಸಲು ನಾನು ಸಿದ್ಧಳಿದ್ದೇನೆ. ಈ ಹಸುಗೂಸು ಯಾವ ಪಾಪವನ್ನೂ ಮಾಡಿಲ್ಲವೆಂದು ಎಲ್ಲರಿಗೂ ತಿಳಿದಿದೆ. ಹಾಗಿದ್ದರೂ ಅದನ್ನು ಸುಟ್ಟು ಕರಟಿಸಬೇಕೆಂದು ನಿಮ್ಮ ಧರ್ಮ ಹೇಳುತ್ತಿದೆಯೇ? ನಾನು ಯಾವ ಕಾರಣಕ್ಕೂ ನನ್ನ ಧರ್ಮವನ್ನು ತೊರೆಯುವುದಿಲ್ಲ. ನಿಮಗೆ ಮಾತ್ರವಲ್ಲ ಜಗತ್ತಿನ ಯಾವ ಶಕ್ತಿಗೂ ಅದರಿಂದ ನನ್ನನ್ನು ಹಿಂದೆ ಸರಿಸಲು ಸಾಧ್ಯವಿಲ್ಲ." ಸೋಫಿಯಾ ಗದ್ಗರಿತವಾಗಿದ್ದರೂ ದಿಟ್ಟ ಸ್ವರದಿಂದ ಸಾರಿದಳು.

"ಮುಗಿಯಿತೇ ನಿನ್ನ ಅಧಿಕ ಪ್ರಸಂಗ?" ರಾಜ ಗರ್ಜಿಸಿದ. "ಹೌದು! ಇನ್ನೇನು ಹೇಳಬೇಕು, ಹೇಳಲು ಏನೂ ಉಳಿದಿಲ್ಲ" ಸೋಫಿಯಾ ಉತ್ತರಿಸಿದಳು.

ರಾಜನು ಭಟರತ್ತ ತಿರುಗಿದನು, "ಮಗುವನ್ನು ಆ ನೀಚಳ ಕೈಗೆ ಕೊಡಿರಿ! ಆಕೆಯೇ ಅದನ್ನು ಬೆಂಕಿಗೆಸೆಯಲಿ." ಆಕೆಯು ಕಣ್ಣೀರಿನಿಂದ ಮಗುವಿನ ಮುಖವನ್ನು ತೊಳೆದಳು. ತಾಯಿಯ ನಿಯಂತ್ರಿಸಲಾಗದ ದುಃಖದ ಕಟ್ಟೆ ಒಡೆಯಿತು.

"ಹೂಂ, ಬೇಗ ತಡಮಾಡಬೇಡ" ಫರ್ಡಿನಾಂಡ್‌ನ ಆರ್ಭಟ ವಾತಾವರಣವನ್ನು ನಡುಗಿಸಿತು.

ಸೋಫಿಯಾ ಅಗ್ನಿಕುಂಡದ ಬಳಿ ಸಾಗಿದಳು. ಅಲ್ಲಿ ತಲಪಿದಾಗ ಸ್ವಲ್ಪ ಹಿಂಜರಿದಳು. ಆಕಾಶದತ್ತ ದೃಷ್ಟಿ ಹಾಯಿಸಿ ನಡುಗುವ ತುಟಿಗಳಿಂದ ಉಸುರಿದಳು, "ಪ್ರಭೂ! ನಾನು ನನ್ನ ಮುದ್ದು ಮಗುವನ್ನು ಎಸೆಯುತ್ತಿರುವುದು ಬೆಂಕಿಗಲ್ಲ, ನಿನ್ನ ಸನ್ನಿಧಾನಕ್ಕೆ-ನೀನು ಸ್ವೀಕರಿಸು."

ಕಾಲ ಸಪ್ಪಳ ಕೇಳಿ ಸೋಫಿಯಾ ಹಿಂತಿರುಗಿ ನೋಡಿದಳು. ಒರೆಯಿಂದ ಖಡ್ಗ ಹೊರತೆಗೆದು ಇಬ್ಬರು ನಿಂತಿದ್ದರು. "ಹೂಂ, ತಡಮಾಡಬೇಡ" ರಾಜನ ಆಜ್ಞೆ.

ಸೋಫಿಯಾ ಮಗುವನ್ನು ಎದೆಗೆ ಅಪ್ಪಿಕೊಂಡಳು. ಅದರ ಕಿವಿಯಲ್ಲಿ ಪಿಸುಗುಟ್ಟಿದಳು: "ಮಗೂ, ಚಿನ್ನಾ, ಮುದ್ದು, ನೀನು ನಿನ್ನ ತಂದೆಯ ಬಳಿಗೆ ಸಂತೋಷದಿಂದ ಹೋಗು. ತಂದೆಗೆ ನನ್ನ ಸಲಾಮ್ ತಿಳಿಸು. ತಾಯಿಯು ಶೀಘ್ರದಲ್ಲಿಯೇ ಬರುವಳೆಂದು ಅವರಿಗೆ ತಿಳಿಸಲು ಮರೆಯಬೇಡ."

ಹೀಗೆ ಹೇಳಿದ ಸೋಫಿಯಾ ಕಣ್ಣುಮುಚ್ಚಿ ಅಲ್ಲಾಹನ ನಾಮದಲ್ಲಿ ಮಗುವನ್ನು ಬೆಂಕಿಗೆ ಎಸೆದಳು. ತಕ್ಷಣವೇ ಸ್ಮೃತಿ ತಪ್ಪಿ ಹಿಂದಕ್ಕೆ ಉರುಳಿದಳು. ಮೈದಾನದ ಸುತ್ತಲೂ ನೆರೆದಿದ್ದ ಫರ್ಡಿನಾಂಡ್‌ನ ಪರಿವಾರವು ಅಟ್ಟಹಾಸದಿಂದ ಕುಣಿಯಿತು! ಪೈಶಾಚಿಕ ಕೇಕೆ!

ಫರ್ಡಿನಾಂಡ್ ಮತ್ತು ಆತನ ಉತ್ತರಾಧಿಕಾರಿಗಳ ಕ್ರೂರ ಮರ್ದನಗಳು ಸೋಫಿಯಾ ಮತ್ತು ಮಗುವಿನಂತೆಯೇ ಸ್ಪೈನ್‌ನ ಕೊನೆಯ ಮುಸ್ಲಿಮನೂ ಪರಲೋಕ ಸೇರುವ ತನಕ ಮುಂದುವರಿಯಿತು. ಈ ರೀತಿ 1528ರ ವೇಳೆ ಅಲ್ಲಿ ಒಬ್ಬನೇ ಒಬ್ಬ ಮುಸ್ಲಿಮ್ ಉಳಿದಿರಲಿಲ್ಲ. ವೀರ ಮಹಿಳೆ ಸೋಫಿಯಾ ಸ್ಪೈನ್‌ನ ಕೊಲೆಗಡುಕ ಆಡಳಿತಗಾರರ ಅಸದೃಶ ಕ್ರೌರ್ಯಗಳಿಗೆ ಬಲಿಯಾದ ಅಸಂಖ್ಯಾತ ತಾಯಂದಿರಲ್ಲಿ ಒಬ್ಬಳು. ಇತಿಹಾಸದಲ್ಲಿ ಅಮರಳಾದ ಸೋಫಿಯಾ.

---

# ರಾಂಪುರದ ವೀರಮಾತೆ

ಮೌಲಾನಾ ಮುಹಮ್ಮದಲಿ ಮತ್ತು ಶೌಕತ್ ಅಲೀಯವರು ಭಾರತದ ಸ್ವಾತಂತ್ರ್ಯ ಸಂಗ್ರಾಮ ಚರಿತ್ರೆಯಲ್ಲಿ ಅವಿಸ್ಮರಣೀಯರಾಗಿದ್ದಾರೆ. ಧೈರ್ಯ, ತ್ಯಾಗ ಮತ್ತು ಪ್ರಾಮಾಣಿಕತೆಯಲ್ಲಿ ಅಗ್ರಣಿಗಳಾಗಿದ್ದ ಆ ಮಹಾನುಭಾವರನ್ನು ನೆನಪಿಸದೆ ನಮ್ಮ ದೇಶದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನು ಓದಲು ಸಾಧ್ಯವಿಲ್ಲ. ಅವರ ತತ್ವನಿಷ್ಠೆಯು ಮೊಲೆ ಹಾಲಿನಿಂದಲೇ ಅವರಲ್ಲಿ ಮೈಗೂಡಿತ್ತು. ಹರ್ಖುತ್‌ಬೀ ಎಂದೇ ಖ್ಯಾತರಾದ ಅವರ ತಾಯಿ ಆಬಿದಾ ಬೇಗಮ್ ಇತಿಹಾಸದ ಅಪೂರ್ವ ವೀರ ಮಹಿಳೆಯರಲ್ಲಿ ಓರ್ವರಾಗಿದ್ದಾರೆ. ವೃದ್ಧಾಪ್ಯದಲ್ಲಿಯೂ ಅವರಲ್ಲಿ ಕ್ರಾಂತಿ ಪ್ರಜ್ಞೆ ಪ್ರಜ್ವಲಿಸುತ್ತಿತ್ತು.

ಆಬಿದಾ ಬೇಗಮ್‌ರ ಅಸಾಮಾನ್ಯ ಸ್ಥೈರ್ಯವು ಅನೇಕ ಸಂದರ್ಭಗಳಲ್ಲಿ ಪ್ರಕಟವಾಗಿತ್ತು. ಒಮ್ಮೆ ಮೌಲಾನಾ ಮುಹಮ್ಮದಲಿ ಮತ್ತು ಸಹೋದರ ಶೌಕತ್ ಅಲಿಯವರನ್ನು ಭದ್ರತಾ ಕಾಯ್ದೆಯನ್ವಯ ಬಂಧಿಸಲಾಯಿತು. ಅದರ ಪ್ರತಿಭಟನಾರ್ಥ ರಾಷ್ಟ್ರದಾದ್ಯಂತ ಚಳವಳಿ ನಡೆಯಿತು. ಕೊನೆಗೆ ಬ್ರಿಟಿಷ್ ಸರಕಾರವು ಅವರನ್ನು ಬಿಡುಗಡೆಗೊಳಿಸುವುದು ಅನಿವಾರ್ಯ ವಾಯಿತು. ಆದರೆ ಅಧಿಕಾರಿಗಳು ಅವರಿಂದ ಸರಕಾರಕ್ಕೆ ನಿಷ್ಠೆ ಸಾರುವ ಪ್ರತಿಜ್ಞಾ ಪತ್ರಕ್ಕೆ ಸಹಿ ಹಾಕಿಸಿದ ಬಳಿಕ ಬಿಡುಗಡೆಗೊಳಿಸ ಬೇಕೆಂದು ಬಯಸಿದರು. ಅಂತಹ ಒಡಂಬಡಿಕೆಯ ಪತ್ರವನ್ನು ಅಬ್ದುಲ್ ಮಜೀದ್ ಎಂಬ ಸಿ.ಐ.ಡಿ. ಅಧಿಕಾರಿಯ ಮೂಲಕ ಅವರಿಗೆ ಕಳುಹಿಸಿಕೊಟ್ಟರು. ಆ ಪತ್ರದಲ್ಲಿ ಹೀಗೆ ಬರೆಯಲಾಗಿತ್ತು:

"ಇನ್ನು ಮುಂದೆ ಮಹಾ ಯುದ್ಧ ಮುಗಿಯುವ ತನಕ ನಾವು ಚಕ್ರವರ್ತಿಯ ವೈರಿಗಳಿಗೆ ನೆರವಾಗುವಂತಹ ಏನನ್ನೂ ಹೇಳುವುದಿಲ್ಲ, ಬರೆಯುವುದಿಲ್ಲ ಮತ್ತು ವರ್ತಿಸುವುದಿಲ್ಲ. ಚಕ್ರವರ್ತಿಯ ಸ್ನೇಹಿತರನ್ನು ಅಥವಾ ಬೆಂಬಲಿಗರನ್ನು ಟೀಕಿಸುವ ಏನನ್ನೂ ಹೇಳುವುದಿಲ್ಲ, ಬರೆಯುವುದಿಲ್ಲ, ವರ್ತಿಸುವುದಿಲ್ಲ. ಸಾರ್ವಜನಿಕ ಹಿತಕ್ಕೆ ಹಾನಿಕರವಾಗುವಂತಹ ಯಾವುದೇ ಕಾನೂನುಬಾಹಿರ ಚಟುವಟಿಕೆ ಮತ್ತು ಕೃತ್ಯಗಳಲ್ಲಿ ಭಾಗಿಯಾಗುವುದಿಲ್ಲ."

ಉದಾತ್ತ ಆದರ್ಶಪ್ರಜ್ಞೆ ಮತ್ತು ಉನ್ನತ ಆತ್ಮಾಭಿಮಾನಕ್ಕೆ ಭೂಷಣವಲ್ಲದ ಪ್ರಸ್ತುತ ಪ್ರತಿಜ್ಞಾ ಪತ್ರಕ್ಕೆ ಸಹಿ ಹಾಕದಂತೆ ತಡೆದು ಆಬಿದಾ ಬೇಗಮ್ ಹೀಗೆಂದರು:

"ನೀವು ಬಿಡುಗಡೆಯಾಗುವ ಸುದ್ದಿಯಿಂದ ಸಂತುಷ್ಟಳಾಗಿದ್ದೇನೆ. ಆದರೆ ನಮ್ಮ ವಿಶ್ವಾಸ ಶ್ರದ್ಧೆಗಳಿಗೆ ವಿರುದ್ಧವಾದ ಯಾವುದಾದರೂ ಒಪ್ಪಂದಕ್ಕೆ ಸಹಿ ಹಾಕಿ ನೀವು ಬಿಡುಗಡೆಗೊಂಡರೆ ನನ್ನ ಈ ದುರ್ಬಲ ಹಸ್ತಗಳಿಂದ ನಿಮ್ಮನ್ನು ಹೊಸಕಿ ಹಾಕುತ್ತೇನೆ" ಈ ಮಾತುಗಳನ್ನು ಹೇಳುವಾಗ ಭಾವಾವೇಶದಿಂದ ಆ ವೃದ್ಧೆಯ ತುಟಿಗಳು ಕಂಪಿಸುತ್ತಿದ್ದುವು.

ಹರ್ಸ್ರುತ್‌ಬೀಯವರ ಮಾತುಗಳಿಂದ ಸ್ಫೂರ್ತಿ ಪಡೆದ ಅಲೀ ಸಹೋದರರು ಸರಕಾರವು ನೀಡಿದ ಪ್ರತಿಜ್ಞಾ ಪತ್ರದ ಬದಲಿಗೆ ಬರೆದುಕೊಟ್ಟ ಒಪ್ಪಂದ ಪತ್ರದ ಆರಂಭದಲ್ಲಿ ಹೀಗೆ ಬರೆದಿದ್ದರು: "ಪರಮ ದಯಾಳುವೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ! ನಾವು ಸದಾ ದೇವಭಕ್ತರಾದ ಮುಸ್ಲಿಮರಾಗಿಯೇ ವರ್ತಿಸುತ್ತಿದ್ದೇವೆ. ಪವಿತ್ರ ಕುರ್‌ಆನ್ ಮತ್ತು ಪ್ರವಾದಿವರ್ಯರ(ಸ) ಮೂಲಕ ದೊರೆತ ದೇವಾದೇಶಗಳನ್ನು ನಾವು ಎಲ್ಲಕ್ಕಿಂತ ಮೇಲೆಂದು ಪರಿಗಣಿಸುತ್ತೇವೆ."

ಆಬಿದಾ ಬೇಗಮ್ ತಮ್ಮ ಮಕ್ಕಳನ್ನು ಸಮಕಾಲೀನ ಸಂಪ್ರದಾಯ, ರೂಢಿಗಳಿಗೆ ವಿರುದ್ಧವಾಗಿ ಬೆಳೆಸಿದ್ದರು. ಮುಹಮ್ಮದಲಿಗೆ 2 ವರ್ಷವಾಗಿದ್ದಾಗ ತಂದೆ ಅಬ್ದುಲ್ ಅಲೀಖಾನ್ ಸಿಡುಬು ರೋಗದಿಂದ ನಿಧನರಾದರು. ಅದರಿಂದ ಮಕ್ಕಳ ಸಂರಕ್ಷಣೆ ಮತ್ತು ಶಿಕ್ಷಣವು ತಾಯಿಯ ಹೆಗಲ ಮೇಲೆ ಬಿತ್ತು. ಅವರು ಆ ಹೊಣೆಯನ್ನು ಧೈರ್ಯದಿಂದ ಸ್ವೀಕರಿಸಿದರು. ಅಂದು ಆಕೆ 27 ವಯಸ್ಸಿನ ಯುವ ವಿಧವೆಯಾಗಿದ್ದರು. ಇಸ್ಮಾಈಲ್‌ರನ್ನು(ಅ) ಬೆಳೆಸಿದ ಹಾಜರಾ ಮತ್ತು ಇಬ್ನು ಝುಬೈರ್‌ರಿಗೆ ಸ್ಥೈರ್ಯ ನೀಡಿದ ಅಸ್ಮಾರನ್ನು ನೆನಪಿಸುವ ಆಬಿದಾ ಬೇಗಮ್ ಮಕ್ಕಳ ಶಿಕ್ಷಣವನ್ನು ಸವಾಲಾಗಿ ಸ್ವೀಕರಿಸಿದರು. ತನ್ಮೂಲಕ ಜಗತ್ತಿಗೆ ಎರಡು ಉಜ್ವಲ ನಾಯಕರನ್ನು ಕೊಡುಗೆ ನೀಡಲು ಅವರಿಗೆ ಸಾಧ್ಯವಾಯಿತು.

ಅವರು ಉತ್ತರ ಪ್ರದೇಶದ ರಾಮಪುರದಲ್ಲಿ ಜನಿಸಿದ್ದರು. ಅಲ್ಲಿ ಸಂಪ್ರದಾಯ ವಾದಿಗಳ ಪ್ರಭಾವವಿತ್ತು. ಇಂಗ್ಲಿಷ್ ಶಿಕ್ಷಣ ನಿಷಿದ್ಧವಾಗಿತ್ತು. ಇಂಗ್ಲಿಷ್ ನರಕದ ಭಾಷೆ, ಆ ಭಾಷೆ ಕಲಿಯುವವರು ಶಾಶ್ವತ ಶಿಕ್ಷೆಯ ಹಾದಿಯಲ್ಲಿ ಸಾಗುತ್ತಿರುವವರೆಂದು

ಜನರು ನಂಬುತ್ತಿದ್ದ ಕಾಲ. ಮುಹಮ್ಮದಲಿಯವರ ಪಿತೃ ಸಹೋದರರೂ ಆ ಮೂಢ ನಂಬಿಕೆಯನ್ನು ಬಿಟ್ಟಿರಲಿಲ್ಲ. ಹಾಗಿದ್ದರೂ ಆಬಿದಾ ಬೇಗಮ್ ಎಲ್ಲರನ್ನೂ ಧಿಕ್ಕರಿಸಿ ಮಕ್ಕಳಿಗೆ ಇಂಗ್ಲಿಷ್ ವಿದ್ಯಾಭ್ಯಾಸ ನೀಡಿದರು. ಮುಹಮ್ಮದಲಿ, ಹಿರಿಯ ಸಹೋದರರಾದ ದುಲ್ಫಿಖಾರ್ ಅಲೀ ಮತ್ತು ಶೌಕತ್ ಅಲೀಯವರನ್ನು ಬರೇಲಿಯ ಇಂಗ್ಲಿಷ್ ಶಾಲೆಗೆ ಸೇರಿಸಿದರು. ಅದಕ್ಕಿಂತ ಮೊದಲೇ ಅವರಿಗೆ ಅರಬಿ, ಉರ್ದು ಮತ್ತು ಪರ್ಶಿಯನ್ ಭಾಷೆ ಮತ್ತು ಧಾರ್ಮಿಕ ಶಿಕ್ಷಣವನ್ನೂ ನೀಡಿದ್ದರು.

ಅವರು ಉನ್ನತ ಶಿಕ್ಷಣಕ್ಕಾಗಿ ಮಕ್ಕಳನ್ನು ಅಲೀಗಢಕ್ಕೆ ಕಳುಹಿಸಿದರು. ಇದರಿಂದ ಊರಿನ ಗಣ್ಯರ ಮತ್ತು ಕುಟುಂಬ ಸಂಬಂಧಿಕರ ವಿರೋಧ ಮತ್ತಷ್ಟು ಹೆಚ್ಚಿತು. ಹಾಗಿದ್ದರೂ ಆ ವೀರ ಮಾತೆಯು ಅದೆಲ್ಲವನ್ನು ನಿರ್ಲಕ್ಷಿಸಿ ಮಕ್ಕಳನ್ನು ಸಚ್ಚರಿತರಾದ ಸ್ವಾತಂತ್ರ್ಯ ಹೋರಾಟಗಾರರಾಗಿ ಬೆಳೆಸುವ ಮಹಾನ್ ಧ್ಯೇಯದತ್ತ ಸಾಗಿದರು. ಅನ್ನಿಬೆಸೆಂಟರು ಹೇಳಿರುವಂತೆ ಆಬಿದಾ ಬೇಗಮ್ ಅಚಂಚಲ ಹೃದಯ ಮತ್ತು ಅತುಲ್ಯ ಧೈರ್ಯದ ಅಸಾಮಾನ್ಯ ಮಹಿಳೆಯಾಗಿದ್ದರು. ಅವರು ತನ್ನ ಎಲ್ಲ ಚಿನ್ನಾಭರಣಗಳನ್ನು ಒತ್ತೆಯಿಟ್ಟು ಮಕ್ಕಳಿಗೆ ಶಿಕ್ಷಣ ಕೊಡಿಸಿದರು. ಅವರು ಮಕ್ಕಳ ಗುಣನಡತೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ವಿದ್ಯಾರ್ಜನೆಗಾಗಿ ದೂರದ ಅಲೀಗಢದಲ್ಲಿದ್ದಾಗಲೂ ಮಕ್ಕಳ ಶಿಕ್ಷಣ ಮತ್ತು ನಡತೆಯನ್ನು ಎಚ್ಚರಿಕೆಯಿಂದ ಪರಿಶೀಲಿಸುತ್ತಿದ್ದರು. ಅದಕ್ಕಾಗಿ ಅವರು ಪ್ರತೀವಾರ ಅಲೀಗಢಕ್ಕೆ ಹೋಗುತ್ತಿದ್ದರು.

ಮಕ್ಕಳು ವಿದ್ಯೆ ಗಳಿಸಿ ಸರಕಾರಿ ಸೇವೆಗೆ ಸೇರಬೇಕೆಂದು ಅವರು ಬಯಸಿರಲಿಲ್ಲ. ಬದಲಾಗಿ ಅವರು ದೀನದಲಿತರಿಗೆ ಸೇವೆ ಸಲ್ಲಿಸುವ ಮಾನವ ಪ್ರೇಮಿಗಳಾಗಬೇಕೆಂಬುದು ಅವರ ಬಯಕೆಯಾಗಿತ್ತು. ಈ ವಿಷಯವನ್ನು ಮಕ್ಕಳಿಗೆ ನೇರವಾಗಿ ತಿಳಿಸಿದ್ದರು. ಆಬಿದಾ ಬೇಗಮ್‌ರವರ ಮಾತುಗಳನ್ನೇ ನೋಡೋಣ:

"ನನ್ನ ಪತಿ ನಿಧನರಾದಾಗ ಆರು ವಯಸ್ಸು ಪೂರ್ತಿಯಾಗದ ಶೌಕತ್ ಅಲೀ ಮತ್ತು ಎಳೆಗೂಸಾಗಿದ್ದ ಮುಹಮ್ಮದಲಿಗೆ ನನ್ನ ಮಡಿಲೇ ಆಶ್ರಯವಾಗಿತ್ತು. ಓರ್ವ ಮಹಿಳೆಯ ಮಟ್ಟಿಗೆ ಅದೊಂದು ಕಠಿಣ ಪರಿಸ್ಥಿತಿಯೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ. ನಾನು ಅದನ್ನು ನಿಭಾಯಿಸಲು ನಿರ್ಧರಿಸಿದೆ. ಅಧ್ಯಯನ ಮುಗಿಸಿ ಮರಳಿದ ಮಕ್ಕಳೊಡನೆ ಹೇಳಿದ ಮಾತುಗಳು ನನಗೆ ಈಗಲೂ ನೆನಪಿದೆ. ನನ್ನ ಮಕ್ಕಳೇ, ನೀವಿಬ್ಬರೂ ಹೋರಾಟಗಾರರಾಗಬೇಕೆಂಬುದೇ ನಿಮ್ಮ ತಾಯಿಯ ಆಶೆ. ಶೋಷಿತರಿಗೆ ನೆರವಾಗುವ, ನಿರ್ಗತಿಕರಿಗೆ ನೆಮ್ಮದಿ ನೀಡುವಂತಹ ಎರಡು ಯೋಧರು. ಆ ಹಾದಿಯಲ್ಲಿ ನೀವು ಸಾಗಿದರೆ, ಈ ತಾಯಿಯ ಆಶೆ ಈಡೇರುವುದು. ಈ ತಾಯಿ ಸಂಪೂರ್ಣ ಧನ್ಯಳಾಗುವಳು."

ಸತ್ಯ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡಲು ತಾಯಿಯು ಅಲೀ ಸಹೋದರರಿಗೆ ಎಲ್ಲ ರೀತಿಯ ಪ್ರೇರಣೆ ಮತ್ತು ಪ್ರೋತ್ಸಾಹವನ್ನು ನೀಡಿದರು. ಅವರು ಬಂಧು-ಮಿತ್ರರ

ಆಕ್ಷೇಪ ಮತ್ತು ಟೀಕೆಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ತನ್ನ ಮಕ್ಕಳನ್ನು ಧರ್ಮ ಯುದ್ಧಕ್ಕೆ ಕಳುಹಿಸಿದರು. ಆ ಘಟನೆಯನ್ನು ಆಬಿದಾ ಬೇಗಮ್ ಹೀಗೆ ನೆನಪಿಸಿದ್ದಾರೆ:

"ನನ್ನ ಆಶೆಗಳನ್ನು ಈಡೇರಿಸ ಹೊರಟ ನನ್ನ ಪ್ರಿಯ ಪುತ್ರರಿಗೆ ಗಾಢಾಂಧಕಾರ ದಿಂದ ಕವಿದ ಕಾರಾಗೃಹ ತೆರೆಯಲ್ಪಟ್ಟಿತು. ಆಡಳಿತಗಾರರು ಬೆದರಿಕೆಯೊಡ್ಡಿದರು. ಬಂಧಿತರಾಗಿದ್ದ ಮಕ್ಕಳನ್ನು ನೋಡುವುದಕ್ಕಾಗಿ ನಾನು ಜೈಲಿಗೆ ಹೋದೆ. ಸೆರೆವಾಸ ದಲ್ಲಿದ್ದ ಇಬ್ಬರನ್ನು ಬಳಿ ಕರೆದು ಹೀಗೆ ಹೇಳಿದೆ, ಮುದ್ದಿನ ಮಕ್ಕಳೇ! ಕಾಲವು ನಿಮ್ಮನ್ನು ಎಷ್ಟೇ ವಿಕೃತ ಮತ್ತು ವಿರೂಪಗೊಳಿಸಿದರೂ ನಿಮ್ಮ ಸ್ವಾತಂತ್ರ್ಯದ ಸಂರಕ್ಷಕರು ಸ್ವತಃ ನೀವೇ ಎಂಬ ಸತ್ಯವನ್ನು ಮರೆಯಬಾರದು. ತಾಯಿನಾಡಿನ ಗುಲಾಮಗಿರಿಯ ಬಗ್ಗೆ ನಿಮಗೆ ಕಳವಳವಿಲ್ಲದಿದ್ದರೆ ನೀವು ಈ ಬಂಧನದಲ್ಲಿ ಕ್ಷಣಕಾಲ ವಾದರೂ ಇರುವುದು ನನಗೆ ಇಷ್ಟವಿಲ್ಲ. ನಿಮ್ಮ ಹಾದಿಯು ತಪ್ಪಿದರೆ ನಿಮಗಾಗಿ ಯಾರೂ ಕಣ್ಣೀರು ಸುರಿಸಲಾರರೆಂಬುದನ್ನು ತಿಳಿಯಿರಿ. ಹಾಗಾದರೆ ನಿಮ್ಮ ಮರಣವು ಆತ್ಮಹತ್ಯೆಯೆಂದೇ ಪರಿಗಣಿಸಲ್ಪಡುವುದು."

ಸೆರೆಮನೆಯಲ್ಲಿರುವ ಮಕ್ಕಳ ಭೇಟಿಗಾಗಿ ಹೋಗುತ್ತಿದ್ದಾಗ ರೈಲ್ವೆ ನಿಲ್ದಾಣಗಳಲ್ಲಿ ನನ್ನ ಸಂದರ್ಶನಕ್ಕಾಗಿ ಬರುವ ಜನರೊಂದಿಗೆ ನಾನು ಕೇಳುತ್ತಿದ್ದೆ- "ತನ್ನ ಸಂತಾನ ಗಳಿಗಾಗಿ ಕಣ್ಣೀರು ಸುರಿಸದ ಈ ವೃದ್ಧೆಯ ಈರ್ವರು ಮಕ್ಕಳಿಗಾಗಿ, ನೀವು ಯಾಕೆ ಪ್ರಲಾಪಿಸುತ್ತೀರಿ?"

ಊರವರು ಮತ್ತು ಸಂಬಂಧಿಕರಲ್ಲಿ ಕೆಲವರು ನನ್ನನ್ನು ಸದಾ ಟೀಕಿಸುತ್ತಿದ್ದರು. ನಾನು ನನ್ನ ಮಕ್ಕಳನ್ನು ಅಪಾಯಕಾರಿ ಹಾದಿಯಲ್ಲಿ ನಡೆಸುತ್ತಿರುವೆನೆಂದು ಅವರು ಆರೋಪಿಸಿದರು. ನಾನು ಅವರಿಗೆ ವಸ್ತುಸ್ಥಿತಿಯನ್ನು ಮನಗಾಣಿಸಲು ಆದಷ್ಟು ಪ್ರಯತ್ನಿಸಿದೆ. ನಾನು ಅವರೊಡನೆ ಹೇಳಿದ್ದೆ- ನಿಮ್ಮ ಮಾತು ಸರಿಯಲ್ಲ. ಅವರು ಸ್ವಾತಂತ್ರ್ಯ ಮತ್ತು ವಿಜಯದ ಪಥದಲ್ಲಿ ಸಾಗುತ್ತಿದ್ದಾರೆ." ಆಗ ನಿಕಟ ಸಂಬಂಧಿಕರು ಆಕ್ಷೇಪಿಸಿದರು:

"ನೀನು ಘೋರವಾದ ತಪ್ಪು ಮಾಡುತ್ತಿರುವೆ. ಒಂದು ಪ್ರಬಲ ಸರಕಾರದ ಬಾಯಿಗೆ ದುರ್ಬಲ ಮಕ್ಕಳನ್ನು ದೂಡುತ್ತಿರುವೆ." ನಾನು ಹೇಳಿದೆ,

"ಅನಾಥರಾಗಿದ್ದರೂ ನನ್ನ ಕೈಯಲ್ಲಿ ಮುಹಮ್ಮದಲಿ ಮತ್ತು ಶೌಕತ್ ಅಲೀ ಅಲ್ಲಾಹನ ಅಮಾನತ್ ಆಗಿದ್ದಾರೆ. ಅಲ್ಲಾಹನಿಗೆ ಅಹಿತಕರವಾದ ಮಾರ್ಗದಲ್ಲಿ ನಾನು ಅವರನ್ನು ಬಿಟ್ಟರೆ ಆತನ ಕೋಪ-ಶಾಪಗಳಿಗೆ ಗುರಿಯಾಗಬೇಕಾಗಿತ್ತು. ನನ್ನ ಸ್ವಂತ ಲಾಭವನ್ನು ಕಡೆಗಣಿಸಿ ದೇಶದ ಸ್ವಾತಂತ್ರ್ಯ ಮತ್ತು ರಕ್ಷಣೆಗಾಗಿ ನಾನು ಅವರನ್ನು ಕಳುಹಿಸಿದ್ದು ಪಾಪವೆಂದಾದರೆ ಅದರ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸಲು ನಾನು ಸಿದ್ಧಳಾಗಿದ್ದೇನೆ."

ಕರಾಚಿ ಜೈಲಿನಲ್ಲಿದ್ದ ನನ್ನ ಮಕ್ಕಳನ್ನು ನೋಡಬೇಕೆಂಬ ಆಸೆ ಬಲವಾಗಿತ್ತು. ಅಂದು ಊರುಗೋಲಿಲ್ಲದೆ ನನಗೆ ನಡೆಯಲು ಸಾಧ್ಯವಾಗಿರಲಿಲ್ಲ. ನಾನು ಅಲ್ಲಾಹ ನೊಡನೆ ದೈನ್ಯದಿಂದ ಪ್ರಾರ್ಥಿಸಿದೆ. ಆತ ಅದನ್ನು ಸ್ವೀಕರಿಸಿದ. ನನ್ನ ಆರೋಗ್ಯ ಸುಧಾರಿಸಿತು. ತಡ ಮಾಡದೇ ಕರಾಚಿಗೆ ಹೊರಟೆ. ನಾನು ಸಂಚರಿಸುವ ರೈಲುಗಾಡಿಯ ಪ್ರತಿಯೊಂದು ಸ್ಟೇಶನ್‌ಗೆ ತಲುಪಿದಾಗಲೂ ರೋದಿಸುತ್ತಾ ಕಣ್ಣೀರು ಸುರಿಸುವ ಧಾರಾಳ ಜನರು ಗುಂಪು ಸೇರುತ್ತಿದ್ದರು.

ತನ್ನ ಮಕ್ಕಳ ಪರಿಸ್ಥಿತಿಯಿಂದ ಧೈರ್ಯಗೆಡುತ್ತಿರುವ ನನಗೆ ಅವರು ಸಮಾಧಾನ ಹೇಳುತ್ತಿದ್ದರು. ಆಗ ನಾನು ಅವರೊಡನೆ ಹೇಳುತ್ತಿದ್ದೆ, "ಪ್ರೀತಿಯ ಮಕ್ಕಳೇ, ನೀವು ಈ ಮುದುಕಿಯನ್ನು ಈಗೇಕೆ ಸಮಾಧಾನ ಪಡಿಸುತ್ತೀರಿ? ಒಬ್ಬ ಮುಹಮ್ಮದಲಿ ಅಥವಾ ಒಬ್ಬ ಶೌಕತ್ ಅಲೀ ಹೋದರೆ ಹೋಗಲಿ! ಅವರಂತೆಯೇ ನೀವೂ ನನಗೆ ಪ್ರೀತಿಯ ಮಕ್ಕಳಾಗಿದ್ದೀರಿ!"

ಕೊನೆಗೆ ನಾನು ಕರಾಚಿ ಜೈಲಿಗೆ ಹೋದೆ. ನನ್ನ ಮಕ್ಕಳನ್ನು ಕಣ್ತುಂಬಾ ನೋಡಿ ಮನಸ್ಸು ಕುಣಿಯಿತು. ಆದರೆ ಒಂದು ವಿಷಯವು ನನ್ನ ಮನಸ್ಸನ್ನು ಬಹಳವಾಗಿ ನೋಯಿಸಿತು. ಕಳ್ಳರು ಮತ್ತು ಕೊಲೆಗಾರರು ಧರಿಸುವ ಬಟ್ಟೆಗಳನ್ನು ಅವರಿಗೆ ತೊಡಿಸಲಾಗಿತ್ತು. ಹಾಗಿದ್ದರೂ ನಾನು ಅವರೊಡನೆ ಹೇಳಿದೆ: "ಪ್ರೀತಿಯ ಮಕ್ಕಳೇ! ಏನೇ ಕಷ್ಟ ಬಂದರೂ ಅಂಜಬೇಡಿ. ಅಧೀರರಾಗಬೇಡಿ. ದೈಹಿಕ ಸುಖ ಬಯಕೆಗಳ ಒತ್ತಡದಿಂದ ಸೆರೆಮನೆವಾಸದ ಬಗ್ಗೆ ಎಂದಾದರೂ ಕೊರಗಿದರೆ ಈ ಮಾತೆಯು ಅದನ್ನು ಸಹಿಸಲಾರಳು. ರಣಾಂಗಣಕ್ಕೆ ಧುಮುಕಿರುವ ನೀವು ಇತರರಿಗಿಂತ ಮುಂಚಿತವಾಗಿ ವೀರ ಮರಣವನ್ನು ಹೊಂದಬೇಕು."

ರಾಮಪುರದ ವೀರ ಮಾತೆಯ ಮಕ್ಕಳು ಆಕೆಯ ಆಕಾಂಕ್ಷೆಗಳನ್ನು ಈಡೇರಿಸುವ ಪಣ ತೊಟ್ಟಿದ್ದರು. ಹರ್‍ರುತ್‌ಬೀಯವರ ಶಿಕ್ಷಣ ಶೀಲಗಳನ್ನು ಮೈಗೂಡಿಸಿದ ಅಲೀ ಸಹೋದರರು ಪರಕೀಯ ಆಡಳಿತದ ವಿರುದ್ಧ ವೀರಾವೇಶದಿಂದ ಹೋರಾಡಿದರು. ಪ್ರಚೋದನೆ, ಪ್ರತಿಭಟನೆಗಳಿಗೆ ಅವರು ಮರುಳಾಗಲಿಲ್ಲ. ಆದ್ದರಿಂದ ಅವರಿಬ್ಬರೂ ಭಾರತದ ಸ್ವಾತಂತ್ರ್ಯ ಹೋರಾಟ ಚರಿತ್ರೆಯ ಅವಿಭಾಜ್ಯ ಅಂಗವಾದರು. ಅವರ ಜೊತೆಗೆ ರಾಮಪುರದ ಅವರ ವೀರ ಮಾತೆಯೂ ಅಮರರಾದರು.

# ಕ್ರಾಂತಿಕಾರಿಯ ಪತ್ನಿ

ಈಜಿಪ್ಟ್‌ನ 'ಅಲ್ ಇಖ್ವಾನುಲ್ ಮುಸ್ಲಿಮೂನ್' 20ನೆಯ ಶತಮಾನದ ಪ್ರಮುಖ ಇಸ್ಲಾಮಿ ಆಂದೋಲನಗಳಲ್ಲೊಂದು. ಹಸನುಲ್ ಬನ್ನಾ ಅದರ ಸ್ಥಾಪಕ ನಾಯಕರು. ಪ್ರಥಮ 'ಸಾರ್ವಜನಿಕ ಮಾರ್ಗದರ್ಶಿ'(ಅಲ್ ಮುರ್ಶಿದುಲ್ ಆಮ್) ಅವರೇ. 1949ರಲ್ಲಿ ಹಸನುಲ್ ಬನ್ನಾರ ಹತ್ಯೆಯಾದ ಬಳಿಕ ಇಖ್ವಾನ್‌ನ ನಾಯಕತ್ವವನ್ನು ಶೈಖ್ ಹಸನುಲ್ ಹುದೈಬಿಯವರು ವಹಿಸಿಕೊಂಡರು. ತರುವಾಯ ಅವರ ಜೀವನದ ಅಮೂಲ್ಯ 17 ವರ್ಷಗಳನ್ನು ಸೆರೆಮನೆ ನುಂಗಿತು. ಜೈಲಿನಲ್ಲಿ ಅವರು ಅತಿ ಕಠಿಣ ಹಿಂಸೆಯನ್ನು ಅನುಭವಿಸಿದ್ದರು. ಹಾಗಿದ್ದರೂ ಹಸನುಲ್ ಹುದೈಬಿಯವರು ಅನ್ಯಾಯಕ್ಕೆ ತಲೆಬಾಗಲಿಲ್ಲ. ಅಲ್ಲಾಹನ ಸಂಪ್ರೀತಿಗಾಗಿ ಎಲ್ಲವನ್ನೂ ತಾಳ್ಮೆಯಿಂದ ಸಹಿಸಿದರು. ಅವರ ಪತ್ನಿ ನಈಮ್ ಉಮ್ಮು ಉಸಾಮರೂ ನಾನಾ ರೀತಿಯ ಹಿಂಸೆಗಳನ್ನು ಅನುಭವಿಸಬೇಕಾಯಿತು. ಆದರೆ ಅವರು ವಿಚಲಿತರಾಗಲಿಲ್ಲ. ಧೈರ್ಯದಿಂದ ಸತ್ಯದಲ್ಲಿ ದೃಢವಾಗಿ ನಿಂತರು. ಉಮ್ಮು ಉಸಾಮರು ಪ್ರವಾದಿ ವರ್ಯರ(ಸ) ಕಾಲದ ಸಹಾಬಿ ಮಹಿಳೆಯರಂತೆಯೇ ಬಾಳ್ವೆ ನಡೆಸಿದ ವೀರ ಮಹಿಳೆಯಾಗಿದ್ದಾರೆ.

1945ರಲ್ಲಿ ಹಸನುಲ್ ಹುದೈಬಿಯವರು ಬಂಧಿಸಲ್ಪಟ್ಟಾಗ ಸಂಬಂಧಿತ ಖಾತೆಯ ಸಚಿವರ ಪತ್ನಿಯು ಉಮ್ಮು ಉಸಾಮರ ಮನೆಗೆ ಬಂದರು. ರೂಹಿ ಎಂಬ ಆ ಮಹಿಳೆ ಶಿಷ್ಟಾಚಾರದಂತೆ ಕುಟುಂಬದ ಭೇಟಿಗೆ ಬಂದಿದ್ದರು. ಹಸನುಲ್ ಹುದೈಬಿ ಯವರ ಮನೆಗೆ ತಲುಪಿದಾಗ ಅವರಿಗೆ ಪ್ರಸನ್ನವದನಳಾದ ಓರ್ವ ಮಹಿಳೆ ಮತ್ತು ಮೂವರು ಹುಡುಗಿಯರು ಕಾಣಿಸಿದರು. ಗಂಡು ಮಕ್ಕಳೆಲ್ಲರೂ ಜೈಲಿನಲ್ಲಿದ್ದರು. ರೂಹಿಯನ್ನು ಸ್ವಾಗತಿಸಲು ಎಲ್ಲರೂ ಮುಂದೆ ಬಂದರು. ಬಹಳ ಸಂತೋಷದಿಂದ ಅವರೊಡನೆ ವರ್ತಿಸಿದರು. ಸ್ವಲ್ಪ ಸಮಯದ ಬಳಿಕ ಇನ್ನೋರ್ವ ಸಚಿವರ ಪತ್ನಿಯು ಅಲ್ಲಿಗೆ ಬಂದರು. ಅವರು ಮಾತಿನ ಮಧ್ಯೆ ಹಸನುಲ್ ಹುದೈಬಿಯವರ ಪತ್ನಿಯನ್ನು ಸಾಂತ್ವನ ಪಡಿಸುತ್ತಾ ಹೀಗೆಂದರು: "ಉಮ್ಮು ಉಸಾಮ ಕೊರಗಬೇಡಿರಿ. ನನ್ನ ಪತಿಯು ನಿಮಗೆ ಮತ್ತು ನಿಮ್ಮ ಮಕ್ಕಳಿಗೆ ಅಭಿನಂದನೆ ತಿಳಿಸಲಿಕ್ಕಾಗಿ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ಹಸನುಲ್ ಹುದೈಬಿಯವರಿಗೆ ಯಾವ ರೀತಿಯ ತೊಂದರೆಯೂ ಆಗದಂತೆ ಅವರು ನೋಡಿಕೊಳ್ಳುವುದಾಗಿ ಆಶ್ವಾಸನೆ ನೀಡಿದ್ದಾರೆ."

"ನಿಮಗೂ ಸಚಿವರಿಗೂ ಕೃತಜ್ಞತೆ. ಆದರೆ ನಮಗೆ ಸಾಂತ್ವನ ನೀಡಿ ಹುದೈಬಿಯವರ ಸುರಕ್ಷಿತತೆಯ ಭರವಸೆ ನೀಡುವ ಅಗತ್ಯವೇನಿದೆ? ನಾವು ಕಳವಳ ಗೊಂಡಿರುವೆವೆಂದು ಅವರಿಗೆ ಯಾರು ಹೇಳಿದರು?" ಎಂದು ನಈಮ್ ಉಮ್ಮು ಉಸಾಮ ಕೇಳಿದರು.

"ಕ್ರಾಂತಿ ನ್ಯಾಯಾಲಯದಲ್ಲಿ ಹುದೈಬಿಯವರ ವಿಚಾರಣೆಯನ್ನು ತಡೆಯುವ ಪ್ರಯತ್ನ ನಡೆಯುತ್ತಿದೆ. ಆದ್ದರಿಂದ ಅವರ ಬಗ್ಗೆ ಹೆದರಬೇಕಾಗಿಲ್ಲವೆಂದು ತಿಳಿಸಿದೆ ಅಷ್ಟೆ" ಸಚಿವರ ಪತ್ನಿ ವಿವರಿಸಿದರು.

"ಕ್ರಾಂತಿ ನ್ಯಾಯಾಲಯದಲ್ಲಿ ಒಂದು ವೇಳೆ ವಿಚಾರಣೆ ನಡೆಸಿದರೂ ಯಾಕೆ ಹೆದರಬೇಕು? ಹುದೈಬಿಯವರ ಇಡೀ ಜೀವನವು ಉಜ್ವಲ ತ್ಯಾಗ ಮತ್ತು ವೀರೇತಿಹಾಸಗಳಿಂದ ತುಂಬಿದೆ. ಅವರ ವಿನಯ ಮತ್ತು ಭಯಭಕ್ತಿಯಿಂದ ಮರೆಯಾಗಿದ್ದ ಜೀವನದ ಉಜ್ವಲ ಅಂಶಗಳು ಸೇನಾ ನ್ಯಾಯಾಲಯದ ವಿಚಾರಣೆಯಿಂದ ಬಹಿರಂಗವಾಗ ಬಹುದಷ್ಟೆ" ಉಮ್ಮು ಉಸಾಮ ದೃಢ ಸ್ವರದಲ್ಲಿ ಹೇಳಿದರು.

"ಸೇನಾ ನ್ಯಾಯಾಲಯದ ವಿಚಾರಣೆಯ ಸ್ವರೂಪ ಮತ್ತು ಅದರ ಪರಿಣಾಮವನ್ನು ನೀವು ತಿಳಿದಿದ್ದೀರಾ?" ಸಚಿವರ ಪತ್ನಿ ಕೇಳಿದರು. "ಅಲ್ಲಿ ವಿಚಾರಣೆ ಮತ್ತು ಸಾಕ್ಷ್ಯಾಧಾರ ಗಳಿಲ್ಲದೆ ತೀರ್ಪು ನೀಡಲಾಗುವುದು ಮತ್ತು ಅವರಿಗೆ ಗಲ್ಲು ಶಿಕ್ಷೆ ನೀಡಬಹುದೆಂದು ನನಗೂ ನನ್ನ ಮಕ್ಕಳಿಗೂ ತಿಳಿಸಲು ಬಂದಿದ್ದೀರಾ? ಆದರೆ ಹಸನುಲ್ ಹುದೈಬಿ ಯವರು ಇಖ್ವಾನುಲ್ ಮುಸ್ಲಿಮೂನ್‌ನ ನಾಯಕತ್ವವನ್ನು ಆ ವಿಷಯ ತಿಳಿಯದೆ ವಹಿಸಿಕೊಂಡಿಲ್ಲವೆಂಬುದನ್ನು ಸಚಿವರಿಗೆ ತಿಳಿಸಿರಿ. ತನ್ನ ಮುಂಗಾಮಿಯಾಗಿದ್ದ ಹಸನುಲ್ ಬನ್ನಾರನ್ನು ಒಳಸಂಚಿನಿಂದ ಕೊಂದು ಅವರ ರಕ್ತವು ರಾಜಧಾನಿಯಲ್ಲಿ ಹರಿದು ಹೋದ ಘಟನೆ ಹುದೈಬಿಯವರಿಗೆ ಚೆನ್ನಾಗಿ ತಿಳಿದಿದೆ. ಆ ಅನುಭವಗಳ ನಿರೀಕ್ಷೆಯಿಂದಲೇ ಅವರು ಹಸನುಲ್ ಬನ್ನಾರ ಅನುಯಾಯಿಯಾಗಿದ್ದರು. ಅವರು ನಮ್ಮನ್ನು ಅಲ್ಲಾಹನಿಗೆ ಒಪ್ಪಿಸಿದ್ದಾರೆ. ನಾವು ಕೂಡಾ ಹಾಗೆಯೇ ಮಾಡಿದ್ದೇವೆ. ಹಸನುಲ್ ಬನ್ನಾರ ಪರಿಸ್ಥಿತಿ ಬಂದರೆ ನಾವು ಆ ಬಗ್ಗೆ ಸಂತೋಷ ಪಡುತ್ತೇವೆ. ಹಾಗಾದರೆ ಹುತಾತ್ಮರಾಗಿ ಅಲ್ಲಾಹನ ಮುಂದೆ ಹಾಜರಾಗುವ ಸೌಭಾಗ್ಯ ನಮಗೆ ದೊರೆಯುತ್ತದೆ" ಎಂದ ಬಳಿಕ ಉಮ್ಮು ಉಸಾಮ ತನ್ನ ಪುತ್ರಿಯರನ್ನು ನೋಡಿ ಹೀಗೆ ಹೇಳಿದರು: "ಇದು ನನ್ನ ಅಭಿಪ್ರಾಯ ಮಕ್ಕಳೇ! ನೀವೇನು ಹೇಳುತ್ತೀರಿ?"

"ತಾಯಿಯವರು ಹೇಳಿರುವುದನ್ನೇ ನಾವೂ ಹೇಳುತ್ತೇವೆ" ಅಲೀಖಾ, ಖಾಲಿದ ಮತ್ತು ಸುಆದ್ ಒಕ್ಕೊರಲಿನಿಂದ ಹೇಳಿದರು.

1955ರಲ್ಲಿ ಸೇನಾ ನ್ಯಾಯಾಲಯವು ಹಸನುಲ್ ಹುದೈಬಿಯವರಿಗೆ ಮರಣ ದಂಡನೆಯ ತೀರ್ಪು ನೀಡಿತು. ಸೌದಿ ರಾಜರು ಅದನ್ನು ತೀವ್ರವಾಗಿ ವಿರೋಧಿಸಿ ತೀರ್ಪನ್ನು ಬದಲಾಯಿಸುವಂತೆ ಬಲವಾಗಿ ಒತ್ತಾಯಿಸಿದರು. ಆದುದರಿಂದ ಮರಣ

ದಂಡನೆಯನ್ನು ಕೈ ಬಿಟ್ಟು ಜೀವಾವಧಿ ಜೈಲು ಶಿಕ್ಷೆ ನೀಡಲಾಯಿತು. ಆ ಬಳಿಕ ಈಜಿಪ್ಟ್‌ನ ಸೌದಿ ದೂತವಾಸದ ಮೂಲಕ ರಾಜರಿಗೆ ದೊರೆತ ಪತ್ರವು ಅವರನ್ನು ಅಚ್ಚರಿಗೊಳಿಸಿತು. ಹಸನುಲ್ ಹುದೈಬಿಯವರ ಪತ್ನಿ ಮತ್ತು ಪುತ್ರಿಯರು ಆ ಪತ್ರವನ್ನು ಜಂಟಿಯಾಗಿ ಬರೆದಿದ್ದರು:

ಅದರಲ್ಲಿ ಹೀಗೆ ಬರೆದಿತ್ತು-

"ಸನ್ಮಾನ್ಯ ರಾಜರಿಗೆ!

ನಿಮ್ಮ ಸದ್ಭಾವನೆಗೆ ಕೃತಜ್ಞತೆ. ಸರ್ವಶಕ್ತನಾದ ಅಲ್ಲಾಹನು ಪ್ರತಿಫಲವನ್ನು ದಯಪಾಲಿಸಲಿ. ನಾವು ಈ ಆಂದೋಲನದಲ್ಲಿ ಸದಾ ಸ್ಥಿರವಾಗಿರುವೆವೆಂದು ನಿಮಗೆ ತಿಳಿಸಲು ಈ ಸಂದರ್ಭ ವನ್ನು ಬಳಸುತ್ತೇವೆ. ಹಸನುಲ್ ಹುದೈಬಿಯವರು ಹುತಾತ್ಮ ರಾದರೂ ಅಥವಾ ಹೆಚ್ಚು ಕಾಲ ಬದುಕಿದ್ದರೂ ಒಂದು ವಿಷಯವಂತೂ ಖಚಿತ. ಈ ಸಂಘರ್ಷ ನಿರಂತರ ನಡೆಯುವುದು. ವಾಸ್ತವದಲ್ಲಿ ಇದು ಹಸನುಲ್ ಹುದೈಬಿ ಮತ್ತು ಅಬ್ದುನ್ನಾಸಿರ್‌ರ ನಡುವಣ ಸಂಘರ್ಷವಲ್ಲ. ಸೇನಾ ಮಂಡಳಿ ಮತ್ತು ಇಖ್ವಾನ್‌ನ ಸಂಘರ್ಷವಾಗಿದೆ. ಸತ್ಯ ಮತ್ತು ಅಸತ್ಯಗಳ ಶಾಶ್ವತ ಸಂಘರ್ಷವಾಗಿದೆ. ವಿಶ್ವಾಸ ಮತ್ತು ಅವಿಶ್ವಾಸದ ಸಂಘರ್ಷ! ಸನ್ಮಾರ್ಗ ಮತ್ತು ದುರ್ಮಾರ್ಗಗಳ ಬಲ ಪರೀಕ್ಷೆ! ಅಲ್ಲಾಹನ ಸೇನೆ ಮತ್ತು ಪಿಶಾಚಿಯ ಸೇನೆಯ ಹೋರಾಟ. ಸಹಸ್ರಾರು ಮುಜಾಹಿದರು ಪ್ರಾಣ ಕಳಕೊಂಡರೂ ಈ ಆಂದೋಲನದ ಧ್ವಜವು ಮೇಲೇರಿ ಅದರ ಚಟುವಟಿಕೆಗಳು ಅಭಂಗುರವಾಗಿ ಸಾಗುವುದು. ಕೊನೆಗೆ ಅಲ್ಲಾಹನ ವಾಣಿಯು ಉನ್ನತಿ ಗೇರುವುದು. ಸತ್ಯ ಜಯಿಸುವುದು, ಅಸತ್ಯ ಸೋಲುವುದು."

"ಜಮಾಲ್ ಅಬ್ದುನ್ನಾಸಿರ್‌ರ ಕಿರಾತ ಆಡಳಿತದಲ್ಲಿ ಕೇವಲ ಪುರುಷರಲ್ಲದೇ ಅನೇಕ ಮಹಿಳೆಯರೂ ಕಾರಾಗೃಹ ಸೇರಿದ್ದರು. ಅದರಲ್ಲಿ ವೃದ್ಧೆ ಉಮ್ಮು ಉಸಾಮರೂ ಇದ್ದರು. ಅವರು ಇಖ್ವಾನುಲ್ ಮುಸ್ಲಿಮೂನ್‌ನ ಮಹಿಳಾ ಘಟಕದ ಅಧ್ಯಕ್ಷೆಯಾಗಿದ್ದರು. ಅವರ ಸದ್ವರ್ತನೆ ಮತ್ತು ಸಮರ್ಥ ನಾಯಕತ್ವವು ಅನೇಕ ಕಾರ್ಯಕರ್ತೆ ಯರನ್ನು ಆಂದೋಲನಕ್ಕೆ ಸೆಳೆಯಿತು. ಅದರೊಂದಿಗೆ ಝೈನಬುಲ್ ಗಝ್ಝಾಲಿ, ಆಮಿನಾ ಝೌಹರಿ, ಫಾತಿಮಾ ಬದ್ರಿ, ಸ್ವನಿಕತುಲ್ ವಿಶಾಮಿ, ಹಮಿದಾ ಕುತ್‌ಬ್, ಸನಿಕ್ಷ ಅಬ್ದುಲ್ ವಾಹಿದ್, ಆಮಿಲ್ ಅಶ್ಮಾವಿಯಂಥ ಸಮರ್ಥ ಸಹಕಾರ್ಯಕರ್ತೆಯರ ಸಹಕಾರವೂ ದೊರೆಯಿತು.

ಉಮ್ಮು ಉಸಾಮರನ್ನು ಬಂಧಿಸಿದಾಗ ಪತಿ ಮತ್ತು ಮಕ್ಕಳು ಜೈಲಿನಲ್ಲಿ ತೀವ್ರ ಹಿಂಸೆಗಳಿಂದ ಕಷ್ಟಪಡುತ್ತಿದ್ದರು. ಹಾಗಿದ್ದರೂ ವೃದ್ಧೆ ಮತ್ತು ರೋಗಿಯಾಗಿದ್ದ ಆ ವೀರ ಮಹಿಳೆ ವಿಚಲಿತರಾಗಲಿಲ್ಲ. ಅವರ ಮುಖದಿಂದ ಮುಗುಳ್ನಗೆ ಮಾಯವಾಗಲಿಲ್ಲ. ಅಶಾಂತಿಯು ಅವರ ಮನ ಕೆಡಿಸಲಿಲ್ಲ. ಅವರು ಅಲ್ಲಾಹನಲ್ಲಿ ಭರವಸೆಯಿಟ್ಟು ಎಲ್ಲವನ್ನೂ ಸಹಿಸಿದರು. ಸಹ ಕಾರ್ಯಕರ್ತೆಯರೆಲ್ಲರೂ ತಾಳ್ಮೆ ವಹಿಸುವಂತೆ ಉಪದೇಶಿಸಿದರು.

## ಸಚ್ಚರಿತ ಸಹಧರ್ಮಿಣಿ

1954ರ ಆರಂಭದಲ್ಲಿ ಹಸನುಲ್ ಹುದೈಬಿಯವರು ವಿದೇಶ ಸಂದರ್ಶನಾರ್ಥ ವಿಮಾನವೇರಿದಾಗ ಅವರ ಕಾರು ಚಾಲಕನು ಇಖ್ವಾನುಲ್ ಮುಸ್ಲಿಮೂನ್‌ನ ಕಾರ್ಯದರ್ಶಿ ಅಬ್ದುಲ್ ಹಕೀಮ್ ಆಬಿದ್‌ರ ಬಳಿ ಹೋಗಿ ಕಾರನ್ನು ಏನು ಮಾಡ ಬೇಕೆಂದು ಕೇಳಿದನು. ಆಂದೋಲನದ ನಾಯಕನ ಉಪಯೋಗಕ್ಕಾಗಿ ಸಂಘಟನೆಯು ಆ ಕಾರನ್ನು ನೀಡಿತ್ತು. ಕಾರನ್ನು ಹಸನುಲ್ ಹುದೈಬಿಯವರ ಮನೆಗೆ ಕೊಂಡು ಹೋಗಿ ನಈಮ ಉಮ್ಮು ಉಸಾಮರ ಉಪಯೋಗಕ್ಕೆ ನೀಡುವಂತೆ ಕಾರ್ಯದರ್ಶಿ ಸೂಚಿಸಿದರು. ಆದರೆ ಸ್ವಲ್ಪ ಸಮಯದ ಬಳಿಕ ಚಾಲಕನು ಕಾರನ್ನು ಮರಳಿ ತಂದನು. ಹುದೈಬಿಯವರ ಪತ್ನಿ ಆ ಕಾರನ್ನು ಸ್ವೀಕರಿಸಲಿಲ್ಲ. ನನಗೆ ಅದರ ಅಗತ್ಯವಿಲ್ಲ. ಅದನ್ನು ಬಳಸುವ ಹಕ್ಕೂ ನನಗಿಲ್ಲವೆಂದು ಅವರು ಒತ್ತಿ ಹೇಳಿದರು. ಅನಂತರ ಕಾರ್ಯದರ್ಶಿಯವರು ಫೋನ್‌ನಲ್ಲಿ ಒತ್ತಾಯಿಸಿದರೂ ಉಮ್ಮು ಉಸಾಮ ಒಪ್ಪಲಿಲ್ಲ. ಅವರು ಹೇಳಿದರು, "ಆ ವಾಹನವು ಇಖ್ವಾನುಲ್ ಮುಸ್ಲಿಮೂನ್‌ನ 'ಮುರ್ಶಿದುಲ್ ಆವ್'ರ ಉಪಯೋಗಕ್ಕಾಗಿದೆ. ಅದು ಹಸನುಲ್ ಹುದೈಬಿ ಎಂಬ ವ್ಯಕ್ತಿಗೆ ಸೇರಿದ್ದಲ್ಲ. ಅವರು ಊರಿನಲ್ಲಿಲ್ಲದಿದ್ದರೆ ಮನೆಯವರು ಅದರಲ್ಲಿ ಒಂದು ಅಡಿ ದೂರವೂ ಸಂಚರಿಸಬಾರದು."

"ನೀವು ಇಖ್ವಾನ್‌ನ ಮಹಿಳಾ ಘಟಕದ ನಾಯಕಿಯಾಗಿದ್ದೀರಿ. ಆದ್ದರಿಂದ ಮಹಿಳಾ ಚಟುವಟಿಕೆಗಳಿಗಾಗಿ ನೀವು ಸಂಚರಿಸಬೇಕಾಗುತ್ತದೆ. ಅದಕ್ಕೆ ಕಾರು ಬಳಸ ಬಹುದಲ್ಲಾ" ಕಾರ್ಯದರ್ಶಿ ಅಬ್ದುಲ್ ಹಕೀಮ್ ಹೇಳಿದರು.

"ನಾನು ಸೂಚಿಸಿದ ಹಾಗೂ ನೀವು ಅಂಗೀಕರಿಸಿದ ಕಾರ್ಯಕ್ರಮದನ್ವಯ ನಾನು ಇಖ್ವಾನುಲ್ ಮುಸ್ಲಿಮೂನ್‌ನ ಮಹಿಳಾ ಘಟಕಗಳಿಗೆ ಭೇಟಿ ನೀಡುತ್ತಿದ್ದೇನೆ. ಆದ್ದರಿಂದ ಕಾರು ನಿಮ್ಮ ಬಳಿಯೇ ಇರಲಿ. ನನ್ನ ಸಂಚಾರ ಕಾರ್ಯಕ್ರಮದ ವಿವರವನ್ನು ನಿಮಗೆ ಕಳುಹಿಸುತ್ತೇನೆ. ಅದನ್ನು ನೀವು ಅಂಗೀಕರಿಸಿದಾಗ ಅಗತ್ಯವಿದ್ದರೆ ಮಾತ್ರ ಕಾರು ಕಳುಹಿಸಿ" ಧರ್ಮಭಕ್ತಳಾದ ಮಹಿಳೆ ಖಚಿತವಾಗಿ ತಿಳಿಸಿದರು. ಸಾರ್ವಜನಿಕ ಸೊತ್ತಿನ ಬಳಕೆಯಲ್ಲಿ ಅತ್ಯಧಿಕ ಜಾಗ್ರತೆ ಪಾಲಿಸುತ್ತಿದ್ದ ಹುದೈಬಿಯವರಿಗೆ ತಕ್ಕುದಾದ ಪತ್ನಿ ತಾನೆಂಬುದನ್ನು ಉಮ್ಮು ಉಸಾಮ ತಮ್ಮ ನಡತೆಯಿಂದ ಸಾಬೀತು ಪಡಿಸಿದರು.

ಹಸನುಲ್ ಹುದೈಬಿಯವರು ಪತ್ನಿಯಿಂದ ಸಂಪೂರ್ಣ ಸಂತೃಪ್ತರಾಗಿದ್ದರು. ಒಮ್ಮೆ ಸಹಕಾರ್ಯದರ್ಶಿ ಅಬ್ದುಲ್ ಹಕೀಮ್ ಆಬಿದೀನ್‌ರು ಅವರೊಡನೆ ದಾಂಪತ್ಯ ಜೀವನದ ಬಗ್ಗೆ ವಿಚಾರಿಸಿದರು. ಆಗ ಅವರು ಮುಗುಳ್ನಗುತ್ತಾ, "ಅಲ್ಲಾಹನ ಅನುಗ್ರಹದಿಂದ ನಮ್ಮ ಮಧ್ಯೆ ಈ ತನಕ ಯಾವ ಮನಸ್ತಾಪವೂ ಬಂದಿಲ್ಲ."

"ನಿಮ್ಮ ಸ್ವಭಾವದಲ್ಲಿ ಒಂದು ರೀತಿಯ ಜಿದ್ದು ಇದೆಯಲ್ಲಾ. ಅದನ್ನು ಮಹಿಳೆಯರಿಗೆ ತಾಳಲಾದೀತೇ"

"ಖಂಡಿತವಾಗಿಯೂ ನಈಮ ಎಲ್ಲವನ್ನೂ ಸಂತೋಷದಿಂದ ಸಹಿಸುತ್ತಾಳೆ" ಹಸನುಲ್ ಹುದ್ಯೆಬಿ ಹೇಳಿದರು. ಹುದ್ಯೆಬಿ ಅವರೊಡನೆ ಗೌರವದಿಂದ ವರ್ತಿಸುತ್ತಿದ್ದರು. ಮನೆಯ ಅಡಚಣೆಗಳನ್ನು ಪತಿಗೆ ತಿಳಿಸುತ್ತಿರಲಿಲ್ಲ. ಎಲ್ಲವನ್ನೂ ಸ್ವಯಂ ಬಗೆಹರಿಸುತ್ತಿದ್ದರು. ಅದೇ ವೇಳೆ ಜೀವನದಾದ್ಯಂತ ಎಲ್ಲ ವಿಷಯಗಳಲ್ಲಿಯೂ ಪತಿಯೊಂದಿಗೆ ಸಂಪೂರ್ಣ ಸಹಕರಿಸುತ್ತಿದ್ದರು.

ಆಂದೋಲನ ಚಟುವಟಿಕೆಗಳಲ್ಲಿ ನಿರತರಾಗಿದ್ದಾಗಲೂ ಅಧ್ಯಯನದಲ್ಲಿ ತೀವ್ರ ಆಸಕ್ತಿ ಹೊಂದಿದ್ದರು. ನಾಲ್ಕು ಮಕ್ಕಳ ತಾಯಿಯಾದ ಬಳಿಕ ಫ್ರೆಂಚ್ ಭಾಷೆ ಕಲಿತರು. ಪತಿಯ ನೆರವಿಗೆ ಆ ಭಾಷೆಯ ಅಗತ್ಯ ಕಂಡು ಬಂದುದರಿಂದ ಕೆಲವೇ ತಿಂಗಳುಗಳಲ್ಲಿ ಅವರು ಅದನ್ನು ಕರಗತ ಮಾಡಿಕೊಂಡರು.

---

## ಯಶಸ್ವಿಯಾದ ಹುಡುಕಾಟ

ತೀರಾ ಅನಿರೀಕ್ಷಿತವಾಗಿ ಹೀರನ್, ಅಬ್ದುಲ್ ಅಝೀಝ್‌ರನ್ನು ಭೇಟಿಯಾಗಿದ್ದರು. ಪರಸ್ಪರ ಪರಿಚಯದ ಬಳಿಕ ಅವರು ಪೆಂಟಾಕೋಸ್ಟ್‌ರನ್ನು ಭೇಟಿಯಾಗುವುದಕ್ಕಿಂತ ಮುಂಚೆಯೇ ಅವರು ತನ್ನ ಡೈರಿಯಲ್ಲಿ ಹೀಗೆ ಬರೆದಿದ್ದರು- "ಎಂತಹ ಸುಂದರ ದಿನ, ದೇವಾ ನಿನಗೆ ಅನಂತಾನಂತ ವಂದನೆಗಳು."

ಪೆಂಟಾಕೋಸ್ಟ್‌ರ ಸಂಬಂಧವು ಹೀರನ್‌ರ ಧರ್ಮ-ದೇವ ಕಲ್ಪನೆಗಳಲ್ಲಿ ಬದಲಾವಣೆಯುಂಟು ಮಾಡಿದರೂ ಅದರಿಂದ ಅವರ ಜಿಜ್ಞಾಸೆ ತಣಿಯಲಿಲ್ಲ. ಆದ್ದರಿಂದ ಹೀರನ್ ತನ್ನ ಚಿಂತನೆ ಮುಂದುವರಿಸಿದರು.

ಯೋಗ್ಯವಾದ ಜೀವನ ಹಾದಿಯನ್ನು ಅವರು ಹುಡುಕುತ್ತಿದ್ದರು. ಹೀಗೆ ಕೆಥೋಲಿಕ್ ಸಭೆಯ ಸಂಬಂಧ ಬೆಳೆಸಿದರು. ಹೇರಳ ಪುಸ್ತಕಗಳನ್ನು ಓದಿದರು. ಧಾರ್ಮಿಕ ಆಚಾರಗಳನ್ನು ಪಾಲಿಸಿದರು. ಕೆಥೋಲಿಕ್ ವಿಭಾಗದ ವಿಶ್ವಾಸಾಚಾರಗಳನ್ನು ಪ್ರಚಾರ ಮಾಡುವ ಕೆಲಸವನ್ನೂ ಮಾಡಿದರು. ಆದರೆ ಅವುಗಳಿಂದ ಹೀರನ್‌ಗೆ ಪೂರ್ಣ ತೃಪ್ತಿಯಾಗಲಿಲ್ಲ. ಅದರ ಅನೇಕ ಆಚಾರಗಳು ತರ್ಕಹೀನವೆಂದು ಭಾಸವಾಯಿತು. ಆ ಬಗ್ಗೆ ಪ್ರಶ್ನಿಸಿದರೆ ದೇವ ಹಾದಿಯು ಗೋಚರವಾದೀತೆಂದು ಪಾದ್ರಿಗಳು ಸಮಾಧಾನ ಪಡಿಸುತ್ತಿದ್ದರು.

ಹೀಗಿರಲು, ಅಬ್ದುಲ್ ಅಝೀಝ್‌ನ ಪರಿಚಯವಾಯಿತು. ಆತ ಮುಸ್ಲಿಮನೆಂದು ಅರಿತ ಬಳಿಕ ಹೀರನ್ ಇಸ್ಲಾಮಿನ ಕುರಿತು ಅಧ್ಯಯನ ನಡೆಸ ತೊಡಗಿದರು. ಅವರಲ್ಲಿ ಇಸ್ಲಾಮಿನ ಆಸಕ್ತಿಯನ್ನು ಗುರುತಿಸಿದ ಅಬ್ದುಲ್ ಅಝೀಝ್, ಮುಹಮ್ಮದ್ ಅಸದ್‌ರ

Road to Mecca(ಮಕ್ಕಾದ ಹಾದಿ) ಎಂಬ ಗ್ರಂಥವನ್ನು ಓದಲು ಕೊಟ್ಟರು. ಹೀರನ್ ಅದನ್ನು ಆಸಕ್ತಿಯಿಂದ ಓದಿದರು. ಅದು ಅವರ ಮನದ ಮೇಲೆ ಗಾಢ ಪರಿಣಾಮ ಬೀರಿತು. 'ಮಕ್ಕಾದ ಹಾದಿ'ಯು ಹೀರನ್‌ರ ಜೀವನದಲ್ಲಿ ಹೊಸ ಹಾದಿಯನ್ನು ರೂಪಿಸುತ್ತಿತ್ತು. ಆ ಪುಸ್ತಕವೂ ಸ್ವತಃ ಒಂದು ಪರಿವರ್ತನೆಯ ಆತ್ಮಕಥನವಾಗಿದೆ. ಲಿಯೋ ಪೋಲ್ಡ್ ವೇಯ್ಸ್, ಮುಹಮ್ಮದ್ ಅಸದ್ ಆಗಿ ಪರಿವರ್ತನೆಗೊಂಡ ಕಥನ. ಹೀರನ್ ಇಸ್ಲಾಮಿನ ಕುರಿತು ಓದಿದ ಪುಸ್ತಕ-ಮರ್ಹೂಮ್ ಸಯ್ಯಿದ್ ಅಬುಲ್ ಆಲಾ ಬರೆದ 'ಇಸ್ಲಾಮ್ ಧರ್ಮ' ಎಂಬ ಕೃತಿ. ಇದರಿಂದ ಅವರಿಗೆ ಇಸ್ಲಾಮಿನ ವಿವಿಧ ಅಂಶಗಳ ಸಾಮಾನ್ಯ ಜ್ಞಾನ ಲಭಿಸಿತು. 'ಮಕ್ಕಾದ ಹಾದಿ'ಯಂತೆಯೇ ಅವರ ಮನಪರಿವರ್ತನೆಯಲ್ಲಿ 'ಇಸ್ಲಾಮ್ ಧರ್ಮ' ಮತ್ತು ಶಹೀದ್ ಸಯ್ಯಿದ್ ಕುತುಬ್‌ರ 'ಇಸ್ಲಾಮ್ ನಾಳೆಯ ಧರ್ಮ' ಎಂಬ ಕೃತಿಗಳು ಪ್ರಮುಖ ಪಾತ್ರ ವಹಿಸಿದ್ದವು.

21ನೆಯ ವಯಸ್ಸಿನಲ್ಲಿ ಕೆಥೋಲಿಕ್ ಸಭೆಯ ಸಂಬಂಧವಿರಿಸಿದ್ದ ಹೀರನ್ 23ನೆಯ ವಯಸ್ಸಿನಲ್ಲಿ ಅಬ್ದುಲ್ ಅರ್ಖೀರ್ಝ್‌ರನ್ನು ಭೇಟಿಯಾಗಿದ್ದರು. ಎರಡು ವರ್ಷಗಳ ಬಳಿಕ ಇಬ್ಬರೂ ವಿವಾಹಿತರಾದರು. ಇಸ್ಲಾಮ್ ಸ್ವೀಕರಿಸಿದ ಬಳಿಕ 'ಫಾತಿಮ' ಎಂಬ ಹೆಸರು ಪಡೆದ ಹೀರನ್, ಪತಿ ಅಬ್ದುಲ್ ಅರ್ಖೀರ್ಝ್‌ರೊಂದಿಗೆ ಪಾಕಿಸ್ತಾನದಲ್ಲಿ ಬಂದು ನೆಲೆಸಿದರು. ಇಸ್ಲಾಮೀ ಜೀವನಕ್ಕೆ ತಕ್ಕುದಾದ ವಾತಾವರಣವು ಅವರ ಬಯಕೆಯಾಗಿತ್ತು.

ಪಾಕಿಸ್ತಾನಕ್ಕೆ ಬಂದ ಫಾತಿಮಾ ಹೀರನ್ ತನ್ನ ಸಂಪೂರ್ಣ ಜೀವನವನ್ನು ಇಸ್ಲಾಮೀ ಅಧ್ಯಯನಕ್ಕೆ ವಿನಿಯೋಗಿಸಿದರು. ಅವರು 1960ರಲ್ಲಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದ್ದರೂ 1962ರಲ್ಲಿ ಪಾಕಿಸ್ತಾನಕ್ಕೆ ತಲುಪಿದ ಬಳಿಕವಷ್ಟೇ ಇಸ್ಲಾಮೀ ಕರ್ಮಾನುಷ್ಠಾನ ಮತ್ತು ಇಸ್ಲಾಮೀ ವಸ್ತ್ರಧಾರಣೆಯನ್ನು ಆರಂಭಿಸಿದ್ದರು. ಫಾತಿಮಾ ಇಸ್ಲಾಮಿನ ಕುರಿತು ಹೆಚ್ಚೆಚ್ಚು ಕಲಿತು ಅದನ್ನು ಪಾಲಿಸತೊಡಗಿದಾಗ ಅವರ ಪತಿಯು ಇಸ್ಲಾಮಿನಿಂದ ದೂರ ಸರಿಯುತ್ತಿದ್ದರು. ಅವರು ಮದ್ಯಪಾನಿಯಾಗಿ ಅನಿಸ್ಲಾಮಿಕ ಚಟುವಟಿಕೆಗಳಲ್ಲಿ ನಿರತರಾದರು. ಫಾತಿಮಾ ಹೀರನ್ ತಮ್ಮಿಂದಾದಷ್ಟು ಉಪದೇಶಿಸಿದರು. ಆದರೆ ಅವರ ಪ್ರಯತ್ನ ವಿಫಲವಾಯಿತು. ಆದ್ದರಿಂದ ಅವರು ಪತಿಯಿಂದ ಬೇರ್ಪಡುವುದು ಅನಿವಾರ್ಯವಾಯಿತು.

ಮೂರು ಮಕ್ಕಳೊಂದಿಗೆ ಪಾಕಿಸ್ತಾನದಿಂದ ತಾಯಿನಾಡಾದ ಜರ್ಮನಿಗೆ ಮರಳಿದ ಫಾತಿಮಾ ಹೀರನ್ ಹ್ಯಾಂಬರ್ಗ್‌ನಲ್ಲಿ ವಾಸ ಹೂಡಿದರು. ಪಾಕಿಸ್ತಾನದಂತೆ ಜರ್ಮನಿಯಲ್ಲಿಯೂ ಅವರು ಇಸ್ಲಾಮೀ ಸೇವೆಯಲ್ಲಿ ತನ್ನನ್ನು ಸಂಪೂರ್ಣ ತೊಡಗಿಸಿ ಕೊಂಡರು. ಇಸ್ಲಾಮಿನ ಕುರಿತು ಪಠನಾರ್ಹ ಪುಸ್ತಕ, ಲೇಖನ ಮತ್ತು ಅನುವಾದ ಕೃತಿಗಳ ರಚನೆಯಲ್ಲಿ ತೊಡಗಿದರು. ಮುಹಮ್ಮದ್ ಅಸದ್‌ರ 'ಮಕ್ಕಾದ ಹಾದಿ' ಮತ್ತು ಸಯ್ಯಿದ್ ಕುತುಬ್‌ರ 'ಇಸ್ಲಾಮ್ ನಾಳೆಯ ಧರ್ಮ' ಎಂಬ ಕೃತಿಯನ್ನು

ಜರ್ಮನ್ ಭಾಷೆಗೆ ಅನುವಾದಿಸಿ ಪ್ರಕಾಶನಗೊಳಿಸಿದರು. ಅದಲ್ಲದೆ ಮರ್ಹೂಮ್ ಮೌ|ಮೌದೂದಿ, ಮೌ| ಅಬ್ದುಲ್ ಮಾಜಿದ್ ದರ್ಯಾಬಾದಿ, ಅಮೀರ್ ಅಲಿ, ಸಯ್ಯದ್ ಕುತುಬ್‌ರ ಲೇಖನಗಳನ್ನು ಕ್ರೋಡೀಕರಿಸಿ 'ಟವರ್ಡ್ಸ್ ಮಕ್ಕಾ' ಎಂಬ ಕೃತಿಯನ್ನು ಪ್ರಕಟಿಸಿದರು. ಅದರ ಮೊದಲ ಆವೃತ್ತಿಯ ಅರ್ಧ ಲಕ್ಷ ಪ್ರತಿಗಳು ಕ್ಷಿಪ್ರ ಮಾರಾಟವಾಗಿರು ವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಫಾತಿಮಾ ಹೀರನ್ ಮುಸ್ಲಿಮ್ ಜಗತ್ತಿನ ಪ್ರಖ್ಯಾತ ಬರಹಗಾರರಾಗಿದ್ದಾರೆ. ಪಾಶ್ಚಾತ್ಯರಿಗೆ ಇಸ್ಲಾಮನ್ನು ಪರಿಚಯಿಸುವ ನಿಟ್ಟಿನಲ್ಲಿ ಅವರ ಲೇಖನಗಳು ಪ್ರಶಂಸಾರ್ಹ ಪಾತ್ರ ವಹಿಸುತ್ತಿವೆ. ಜಾತ್ಯಾತೀತ ವಾತಾವರಣದಲ್ಲಿ ಹುಟ್ಟಿ, ಕ್ರೈಸ್ತ ಧರ್ಮದ ವಿಭಿನ್ನ ವಿಶ್ವಾಸಾಚಾರಗಳನ್ನು ದಾಟಿ ಇಸ್ಲಾಮಿಗೆ ಮುಟ್ಟಿದ ಫಾತಿಮಾ ಹೀರನ್‌ರ ಸತ್ಯಾನ್ವೇಷಣೆಯ ಜಿಜ್ಞಾಸೆ ಮತ್ತು ಕಠಿಣ ಪರಿಶ್ರಮ ಈ ಯಶಸ್ಸಿಗೆ ಕಾರಣವಾಗಿದೆ. ಅವರ ಉನ್ನತಿಯಲ್ಲಿ ಓದು ಮತ್ತು ಅಧ್ಯಯನವು ಭಾರೀ ಪ್ರಭಾವ ಬೀರಿದೆ.

---

# ಬೆನ್ನಲ್ಲಿ ಕೂಸು ಕೈಯಲ್ಲಿ ಕೋವಿ

"ರೋಗವಾಸಿಯಾಗಲಿ, ಕಾಲಿನಿಂದ ನಡೆಯುವಂತಾಗಲಿ ಆ ಬಳಿಕ ಯುದ್ಧ ರಂಗಕ್ಕೆ ಮರಳಿ ತನ್ನ ಪತಿ ಆರಂಭಿಸಿದ ಕೆಲಸವನ್ನು ಪೂರ್ಣ ಗೊಳಿಸುವೆ. ಭೂಮಿಯಲ್ಲಿ ಬದುಕಬೇಕೆಂಬ ಆಸೆ ನನಗಿಲ್ಲ. ಹುತಾತ್ಮಳಾಗಬೇಕೆಂಬುದೇ ನನ್ನ ಆಸೆ. ಆದರ್ಶ ಮತ್ತು ರಾಷ್ಟ್ರದ ರಕ್ಷಣೆಗಾಗಿ ಪ್ರಾಣವನ್ನು ಅರ್ಪಿಸುತ್ತೇನೆ." ನೂರ್ ಬೀಬಿ ಹೇಳಿದರು. ಅವರು ಪೇಶಾವರದ ಸರ್ಜಿಕಲ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ರಶ್ಯವು ಅಫ್ಘಾನಿಸ್ತಾನವನ್ನು ಆಕ್ರಮಿಸಿದ್ದ ವೇಳೆ ಸಂಕಷ್ಟಕ್ಕೀಡಾದ ಲಕ್ಷಾಂತರ ಅಫ್ಘಾನ್ ಮಹಿಳೆಯರಲ್ಲಿ ನೂರ್ ಬೀಬಿ ಒಬ್ಬರು. ಒಂದು ವರ್ಷದಿಂದ ಅವರು ಅಲ್ಲಿ ಒಳರೋಗಿಯಾಗಿದ್ದಾರೆ. ರೋಗ ಯಾವಾಗ ಗುಣವಾದೀತೆಂದು ವೈದ್ಯರಿಗೂ ನಿಖರವಾಗಿ ಹೇಳಲಾಗದ ಅವಸ್ಥೆ. ಹಾಗಿದ್ದರೂ ಅವರ ಮಾತು ದೃಢವಾಗಿತ್ತು, ಧೀರವಾಗಿತ್ತು.

1982ರಲ್ಲಿ ಸೋವಿಯತ್ ಸೇನೆಯು ಅಫಘಾನಿಸ್ತಾನದ ಬಷ್ಮಾನ್ ಜಿಲ್ಲೆಯ 'ಅಬ್ಬೀರ್' ಗ್ರಾಮವನ್ನು ಸುತ್ತುವರಿಯಿತು. ತಮ್ಮ ಹಸ್ತಕ ಸರಕಾರದ ವಿರುದ್ಧ ಹೋರಾಡುತ್ತಿರುವ ಸ್ವಾತಂತ್ರ್ಯ ಯೋಧರನ್ನು ನಿರ್ಮೂಲನಗೊಳಿಸುವುದೇ ಸೇನೆಯ ಗುರಿಯಾಗಿತ್ತು. ಗ್ರಾಮ ನಿವಾಸಿಗಳು ಗಾಢ ನಿದ್ರೆಯಲ್ಲಿದ್ದಾಗ ಸೇನೆ ಸುತ್ತುವರಿಯಿತು. ಬೆಳಗಾತ ಸೇನೆಯು ಧ್ವನಿವರ್ಧಕದ ಮೂಲಕ ಶರಣಾಗುವಂತೆ ಗ್ರಾಮ ನಿವಾಸಿಗಳಿಗೆ ಸಾರಿತು. ಆದರೆ ಅಬ್ಬೀರ್ ವಾಸಿಗಳು ಮಣಿಯಲಿಲ್ಲ. ಅವರಿಗೆ ಗುಲಾಮಗಿರಿಗಿಂತ

ಮರಣವೇ ಇಷ್ಟವಾಗಿತ್ತು. ಪಾರತಂತ್ರ್ಯಕ್ಕಿಂತ ಪರಲೋಕ ಯಾತ್ರೆಯೇ ಪ್ರಿಯವೆಂದು ಘೋಷಿಸಿ ಅವರು ಕೈಗೆ ಸಿಕ್ಕಿದ ಆಯುಧಗಳಿಂದ ಶತ್ರು ಸೇನೆಯನ್ನು ಎದುರಿಸಿದರು. ಸೋವಿಯತ್ ಸೈನಿಕರನ್ನು ಆದಷ್ಟು ತಡೆಯಬೇಕೆಂಬ ಅವರ ನಿರ್ಧಾರವನ್ನು ಯಾರೂ ವಿರೋಧಿಸಲಿಲ್ಲ. ಗ್ರಾಮವಾಸಿಗಳಲ್ಲಿ ಅನೇಕ ಮಂದಿ ನಿರಾಯುಧರಾಗಿದ್ದರು. ಹಾಗಿದ್ದರೂ ಕಲ್ಲು, ದೊಣ್ಣೆ ಹಿಡಿದು ಕೋವಿಧಾರಿ ಸೈನಿಕರೊಂದಿಗೆ ಸೆಣಸಿದರು. ಈ ಅಸಾಮಾನ್ಯ ಆತ್ಮಸ್ಥೈರ್ಯವು ವೈರಿಗಳನ್ನೇ ದಿಗಿಲುಗೊಳಿಸಿತು. ಅವರು ಮೆಷಿನ್‌ಗನ್ ಗಳಿಂದ ಧಾರಾಕಾರವಾಗಿ ಗುಂಡುಹಾರಿಸಿದರು. ಬಂದೂಕು ಮತ್ತು ತೋಪುಗಳಿದ್ದ ಕೆಲವು ಹಳ್ಳಿಗರು ಪ್ರತ್ಯುತ್ತರ ನೀಡಿದರು. ಸ್ತ್ರೀಯರೂ ಮಕ್ಕಳೂ ಹೋರಾಟದಲ್ಲಿ ಭಾಗಿಯಾದರು.

ನೂರ್ ಬೀಬಿಯವರು ತನ್ನ ಈರ್ವರು ಹಿರಿಯ ಪುತ್ರರನ್ನು ಯುದ್ಧರಂಗಕ್ಕೆ ಕಳುಹಿಸಿದರು. ಸತ್ಯ ಮತ್ತು ಸ್ವಾತಂತ್ರ್ಯ ರಕ್ಷಣೆಗಾಗಿ ಪ್ರಾಣ ಅರ್ಪಿಸುವುದು ಹರ್ಷದಾಯಕವೆಂದು ಅವರಿಗೆ ತಿಳಿಸಿದರು. ಮೂರು ವಯಸ್ಸಿನ ಕಿರಿಯ ಪುತ್ರನನ್ನು ಒಂದು ದೊಡ್ಡ ಬಂಡೆಯ ಹಿಂದೆ ಅಡಗಿಸಿದರು. ಅಲ್ಲಿಂದ ಮರಳುವಾಗ ಮಗುವಿನೊಂದಿಗೆ ಹೀಗೆಂದರು, "ಇಲ್ಲಿಂದ ಕದಲಬೇಡ. ಕದಲಿದರೆ ಸೋವಿಯತ್ ಸೈನಿಕರು ನಿನ್ನನ್ನು ಕೊಂದು ಬಿಡುವರು" ನೂರ್ ಬೀಬಿ ಅವಸರದಿಂದ ಮನೆಗೆ ಮರಳಿದರು. ತನ್ನ ಕೊನೆಯ ಪುತ್ರಿ ಖೈರ್‌ಬಾನುಳನ್ನು ಬಟ್ಟೆಯಲ್ಲಿ ಸುತ್ತಿ ಬೆನ್ನಿಗೆ ಬಿಗಿದುಕೊಂಡರು. ರಿವಾಲ್ವರ್ ಹಿಡಿದು ಬೀದಿಗಿಳಿದರು. ತಂದೆ ಮತ್ತು ಸಹೋದರ ತೆರಳಿದ ದಿಕ್ಕಿಗೆ ಸಾಗಿದರು. ಅವರು ಧೈರ್ಯದಿಂದ ಹೋರಾಡುತ್ತಿದ್ದರು. ಸಕಲ ಶಸ್ತ್ರಸಜ್ಜಿತರಾಗಿರುವ ರಶ್ಯನ್ ಸೈನಿಕರ ವಿರುದ್ಧ ಹೋರಾಡುವುದು ನಿಷ್ಫಲವೆಂದು ಅವರಿಗೆ ತಿಳಿದಿತ್ತು. ಹಾಗಿದ್ದರೂ ನಮ್ಮ ಗ್ರಾಮವು ನಿರಾತಂಕವಾಗಿ ರಶ್ಯನ್ ಪಿಶಾಚಿಗಳ ಅಧೀನವಾಗಬಾರದೆಂಬ ಛಲವೂ ಇತ್ತು. ಕೊನೆಗೆ ನೂರ್ ಬೀಬಿಯವರ ನಿರೀಕ್ಷೆಯಂತೆಯೇ ಆಯಿತು. ಪತಿ ಮುಹಮ್ಮದ್ ಇಸ್ಲಾಮ್ ಗುಂಡೇಟಿನಿಂದ ಉರುಳಿದರು. ಹಾಗೆಯೇ ಅವರ ತಂದೆ ಮತ್ತು ಸಹೋದರ ಕುಸಿದು ಬೀಳಲು ಹೆಚ್ಚು ಸಮಯ ತಗಲಲಿಲ್ಲ. ಮೂವರೂ ರಕ್ತದ ಮಡುವಿನಲ್ಲಿ ಬಿದ್ದಿರುವುದನ್ನು ನೂರ್ ಬೀಬಿ ನೋಡಿದರು. ಹತರಾಗಿ ಬಿದ್ದರೂ ಅವರ ಮುಖದಲ್ಲಿ ಮಂದಸ್ಮಿತವಿತ್ತು.

ಪಕ್ಕನೆ ಮೂವರು ರಶ್ಯನ್ ಯೋಧರು ನೂರ್ ಬೀಬಿಯವರತ್ತ ನುಗ್ಗಿದರು. ಹತ್ತಿರ ಬಂದಾಗ ನೂರ್ ಬೀಬಿ ತನ್ನ ರಿವಾಲ್ವರ್‌ನಿಂದ ಗುಂಡು ಹಾರಿಸಿದರು. ಗುಂಡು ಖಾಲಿಯಾದಾಗ ಇಬ್ಬರು ನೆಲಕ್ಕುರುಳಿದರು. ಮೂರನೆಯಾತ ಭೀತಿಯಿಂದ ಕಂಗಾಲಾಗಿದ್ದ. ಅಷ್ಟರಲ್ಲಿ ನೂರ್ ಬೀಬಿಯವರ ಎಡಗಾಲು ಗುಂಡೇಟಿನಿಂದ ಘಾಸಿಗೊಂಡಿತ್ತು. ಹಾಗಿದ್ದರೂ ಕುಂಟುತ್ತಾ ಸಾಗಿ ರಿವಾಲ್ವರ್‌ನಿಂದ ಗುಂಡು ತುಂಬಿಸಿ ವೈರಿಗೆ ಹೊಡೆದರು. ಆತನೂ ಹತನಾಗಿ ಬಿದ್ದ. ಆ ಕೂಡಲೇ ನೂರ್ ಬೀಬಿ ಕೂಡಾ

ಬಿದ್ದು ಬಿಟ್ಟರು. ಅವರು ಒಂದು ಕಾಲುವೆಯ ಬದಿಗೆ ಬಿದ್ದಿದ್ದರು. ಆಗ ಬಟ್ಟೆಯಲ್ಲಿ ಸುತ್ತಿ ಬೆನ್ನಿಗೆ ಜೋತಾಡಿಸಿದ್ದ ಮಗು ಜಾರಿ ನೀರಿಗೆ ಬಿತ್ತು. ಆ ಮಗು ನೀರಿನಲ್ಲಿ ಮುಳುಗುತ್ತಿರುವುದನ್ನು ಅವರು ಅಸಹಾಯಕಳಾಗಿ ನೋಡಬೇಕಾಯಿತು. ಎಷ್ಟು ಪ್ರಯತ್ನಿಸಿದರೂ ಅವರಿಗೆ ಮಗುವಿನ ಬಳಿಗೆ ಹೋಗಲಾಗಲಿಲ್ಲ. ತೆವಳುತ್ತಾ ಸಾಗಿದ ನೂರ್ ಬೀಬಿ ಪ್ರಜ್ಞಾಹೀನರಾದರು. ಅನಂತರ ಏನಾಯಿತೆಂದು ಅವರಿಗೆ ತಿಳಿದಿಲ್ಲ.

ಸೋವಿಯತ್ ಪಡೆಯು ಗ್ರಾಮವನ್ನು ಧ್ವಂಸಪಡಿಸಿ ಅಲ್ಲಿಂದ ಹೊರಟು ಹೋಯಿತು. ಅನಂತರ ಅವರ ಮೈದುನನ ಮಗ ಉಸ್ಮಾನ್ ಸಂಬಂಧಿಕರ ಮೃತ ದೇಹಗಳನ್ನು ಹುಡುಕುತ್ತಾ ಬರುತ್ತಿದ್ದಾಗ ನೂರ್‌ಬೀಬಿ ಸಿಕ್ಕಿದರು. ಅವರು ಆಕೆಯನ್ನು ಮೇಲೆತ್ತಿ ಪ್ರಥಮ ಚಿಕಿತ್ಸೆ ನೀಡಿದ ಬಳಿಕ ನೂರ್‌ಬೀಬಿಯವರಿಗೆ ಎಚ್ಚರ ಬಂತು. ಆಗ ಅವರಿಗೆ ಬಂಡೆಯ ಹಿಂದೆ ಅಡಗಿಸಿದ್ದ ಕಿರಿಯ ಪುತ್ರ ಮುಹಮ್ಮದ್ ಸುರೂರ್‌ನ ನೆನಪಾಯಿತು. ತಕ್ಷಣವೇ ಉಸ್ಮಾನ್‌ನನ್ನು ಅಲ್ಲಿಗೆ ಕಳುಹಿಸಿದರು. ಮಗು ಬಳಲಿ ನಿದ್ರಿಸುತ್ತಿತ್ತು.

ರಶ್ಯನ್ ಸೇನೆಯ ಭೀಕರ ಹತ್ಯಾಕಾಂಡದ ಬಳಿಕ ಅಬ್ಬೀರ್ ಗ್ರಾಮದಲ್ಲಿ ಕೆಲವೇ ಮಂದಿ ಉಳಿದಿದ್ದರು. ನೂರ್‌ಬೀಬಿಯವರ ಕುಟುಂಬದಲ್ಲಿ 3 ಮಂದಿ ಬದುಕಿದ್ದರು. ಅವರು ಗಂಭೀರ ಪರಿಸ್ಥಿತಿಯಲ್ಲಿದ್ದ ನೂರ್‌ಬೀಬಿಯವರಿಗೆ ಆದಷ್ಟು ಚಿಕಿತ್ಸೆ ನೀಡಿದರು. ಆದರೂ ಅವರ ರೋಗ ವಾಸಿಯಾಗಲಿಲ್ಲ. ನೋವು ಕಡಿಮೆ ಯಾಗಲಿಲ್ಲ. ಆದ್ದರಿಂದ ಅವರನ್ನು ಓರ್ವ ವೃದ್ಧರು ತನ್ನ ಕತ್ತೆಯ ಮೇಲೆ ಇರಿಸಿ ಹೊರಟರು. 20 ದಿನಗಳ ಕಠಿಣ ಪ್ರಯಾಣದ ಬಳಿಕ ಅವರು ಪೇಶಾವರ ತಲುಪಿದರು. ಅಲ್ಲಿನ ಖೈಬರ್ ಆಸ್ಪತ್ರೆಯಲ್ಲಿ ಸೇರಿಸಿದರು. ಅನಂತರ ಅವರನ್ನು, ಸ್ವಾತಂತ್ರ್ಯ ಹೋರಾಟಗಾರರ ನಾಯಕ ಪ್ರೊ| ಬುರ್ಹಾನುದ್ದೀನ್‌ರು ವಿಶೇಷ ಚಿಕಿತ್ಸೆಗಾಗಿ 'ಅಫ್ಘಾನ್ ಸರ್ಜಿಕಲ್ ಹಾಸ್ಪಿಟಲ್'ಗೆ ದಾಖಲಿಸಿದರು.

ತೀವ್ರ ಯಾತನೆಯನ್ನು ಸಹಿಸಿ ಚಿಕಿತ್ಸೆ ಪಡೆಯುತ್ತಿದ್ದಾಗಲೂ, ನೂರ್‌ಬೀಬಿ ಯವರ ಮನದಲ್ಲಿ ತಾಯಿನಾಡಿಗೆ ಮರಳಿ, ವೈರಿಗಳ ವಿರುದ್ಧ ಹೋರಾಡಬೇಕೆಂಬ ಉತ್ಕಟೇಚ್ಛೆ ತುಂಬಿತ್ತು. ತನ್ನ ಪುತ್ರ ಮುಹಮ್ಮದ್ ಸರ್ವರ್‌ನನ್ನು ಸಮರ್ಥ ಯೋಧನನ್ನಾಗಿ ಮಾಡಬೇಕೆಂದು ನಿರ್ಧರಿಸಿದ್ದರು. ದೇಶದ ಸ್ವಾತಂತ್ರ್ಯ ಗಳಿಸುವ ಮತ್ತು ಸತ್ಯದ ಸ್ಥಾಪನೆಯ ಹೊರತು ಅವರಿಗೆ ನೆಮ್ಮದಿ ಇರಲಿಲ್ಲ. ಅದಕ್ಕಾಗಿ ಸರ್ವಸ್ವವನ್ನೂ ಬಲಿಕೊಡಲು ಸಿದ್ಧರಾಗಿದ್ದರು. ಈಗಾಗಲೇ ಆ ಹಾದಿಯಲ್ಲಿ ಪತಿ, ಈರ್ವರು ಹಿರಿಯ ಪುತ್ರರು ಮತ್ತು ಪುಟ್ಟ ಮಗುವನ್ನು ಕಳೆದುಕೊಂಡಿದ್ದರು.

ಅಫ್ಘಾನಿಸ್ತಾನಕ್ಕೆ ಅಕ್ರಮವಾಗಿ ನುಗ್ಗಿದ ಸೋವಿಯತ್ ಸೇನೆಯ ಕ್ರೌರ್ಯ ಮತ್ತು ಪಾಶವೀಯತೆಗೆ ಬಲಿಯಾಗಿ ಭಿಕಾರಿಗಳಾದ ಲಕ್ಷಾಂತರ ಮಹಿಳೆಯರಲ್ಲಿ ನೂರ್ ಬೀಬಿಯವರೂ ಒಬ್ಬರು. ರಶ್ಯನ್ ಸೈನಿಕರ ಶಕ್ತಿಗೆ ಅಂಜದೇ ಧೈರ್ಯದಿಂದ ಪ್ರತಿಭಟಿಸಿದ ಸಹಸ್ರಾರು ಮಹಿಳೆಯರು ಅಲ್ಲಿದ್ದಾರೆ.

ವಿಶ್ವಾಸ ಮತ್ತು ಸ್ವಾತಂತ್ರ್ಯದ ರಕ್ಷಣೆಗಾಗಿ ರಣರಂಗಕ್ಕೆ ಧುಮುಕಿದ ಅಫ್ಘಾನ್ ಮಹಿಳೆಯರ ಉಜ್ವಲ ಮಾದರಿಯು ಇತಿಹಾಸದಲ್ಲಿ ಅಚ್ಚಳಿಯದೇ ಉಳಿದಿದೆ.

---

# ಮುಸುಕಿಗಾಗಿ ಹೋರಾಟ

"ಇನ್ನು ಖಲೀಫರಿಲ್ಲ. ಖಿಲಾಫತ್ ವ್ಯವಸ್ಥೆಯಿಲ್ಲ. ನಾನು ಅದನ್ನು ರದ್ದು ಪಡಿಸಿದ್ದೇನೆ." 1924ರ ಮಾರ್ಚ್ ತಿಂಗಳಲ್ಲಿ ಮುಸ್ತಫಾ ಕಮಾಲ್ ಸಾರಿದ. ತನ್ಮೂಲಕ ಸುದೀರ್ಘ ಹದಿಮೂರುವರೆ ಶತಮಾನಗಳಿಂದ ನಾಮಮಾತ್ರಕ್ಕೆ ರೂಢಿಯಲ್ಲಿದ್ದ ಇಸ್ಲಾಮೀ ಖಿಲಾಫತ್ ಅವಸಾನವಾಯಿತು. ಉಸ್ಮಾನಿಯಾ ಖಿಲಾಫತ್‌ನ ಕೇಂದ್ರವಾಗಿದ್ದ ಟರ್ಕಿ, ಮುಸ್ತಫಾ ಕಮಾಲ್‌ರ ವಶವಾಯಿತು. ಆತ ಕಟ್ಟಾ ಲೌಕಿಕವಾದಿ ಮತ್ತು ಧರ್ಮ ವಿರೋಧಿಯಾಗಿದ್ದ. ಸಕಲ ರಂಗಗಳಲ್ಲಿಯೂ ಪಾಶ್ಚಾತ್ಯ ಸಂಪ್ರದಾಯವನ್ನು ಹೇರಿದ. ಇಸ್ಲಾಮೀ ಜೀವನ ಕ್ರಮ ಮತ್ತು ವ್ಯವಸ್ಥೆಯನ್ನು ತೊಡೆದು ಹಾಕಿದ. ಧಾರ್ಮಿಕ ಪಾಠ ಶಾಲೆಗಳನ್ನು ಮುಚ್ಚಿದ. ಮಸೀದಿಗಳನ್ನು ಪ್ರದರ್ಶನಾಲಯ ಮತ್ತು ಸಿನೆಮಾ ಮಂದಿರಗಳಾಗಿ ಪರಿವರ್ತಿಸಿದ. ಮಹಿಳೆಯರ ಇಸ್ಲಾಮೀ ಉಡುಪು ಧಾರಣೆಯನ್ನು ನಿಷೇಧಿಸಿದ.

ಹೀಗೆ ಇಸ್ಲಾಮ್ ಮತ್ತು ಅದರ ಸಾಂಸ್ಕೃತಿಕ ಚಿಹ್ನೆಗಳನ್ನು ಅಳಿಸಹೊರಟ ಮುಸ್ತಫಾ ಕಮಾಲ್‌ನ ಕ್ರಮಗಳನ್ನು ಖ್ಯಾತ ವಿದ್ವಾಂಸ ಮತ್ತು ಸುಧಾರಕರಾಗಿದ್ದ ಬದೀವುಝ್ಝಮಾನ್ ನೂರ್ಸಿಯವರು ತೀವ್ರವಾಗಿ ಪ್ರತಿಭಟಿಸಿದರು. ದೇಶದ ನಾನಾ ಕಡೆಗಳಲ್ಲಿ ಅನೇಕ ವಿದ್ಯಾರ್ಥಿ-ವಿದ್ಯಾರ್ಥಿನಿಯರೂ ಯುವಕ-ಯುವತಿಯರೂ ಅವರ ಧರ್ಮ ಪ್ರಚಾರ ಮತ್ತು ಸುಧಾರಣಾ ಚಟುವಟಿಕೆಗಳಿಂದ ಪ್ರಭಾವಿತರಾದರು. ಅದರಿಂದಾಗಿ ಸರಕಾರವು ನೂರ್ಸಿ ಚಳವಳಿಯನ್ನು ದಮನಿಸಿ ಅದರ ಕಾರ್ಯಕರ್ತರನ್ನು ಕಠೋರವಾಗಿ ಹಿಂಸಿಸತೊಡಗಿತು.

ನೂರ್ಸಿ ಚಳವಳಿಗೆ ಸೇರಿದ ಅನೇಕ ವಿದ್ಯಾರ್ಥಿನಿಯರಲ್ಲಿ ಖದೀಜಾ ಬಾಬಾಜಾನ್ ಒಬ್ಬಳು. ಜಗತ್ತಿನ ಮುಸ್ಲಿಮ್ ವಿದ್ಯಾಲಯವೆಂದು ಖ್ಯಾತವಾಗಿದ್ದ 'ಶರೀಅತುಲ್ ಇಲಾಹಿಯ್ಯ' ಕಾಲೇಜಿನಲ್ಲಿ ಅವರು ಕಲಿಯುತ್ತಿದ್ದರು. ಆದರೆ ಅದು ಟರ್ಕಿಯಲ್ಲಿ ಯಹೂದಿ ಗುಪ್ತಚರ ಖಾತೆಯ ಚಟುವಟಿಕೆಗಳ ಕೇಂದ್ರವಾಗಿತ್ತು.

ನೂರ್ಸಿ ಚಳವಳಿಯು ಖದೀಜಾಳ ಮನದಲ್ಲಿ ಮೂಡಿಸಿದ ಬದಲಾವಣೆಯು ಅವರ ವಸ್ತ್ರಧಾರಣೆಯಲ್ಲಿಯೂ ಪ್ರಕಟವಾಯಿತು. ಮುಸುಕು ಧರಿಸಿ ಅವರು ಕಾಲೇಜಿಗೆ

ಬರುತ್ತಿದ್ದರು. ಇದು ಕಾಲೇಜಿನ ನಿರ್ವಾಹಕರಿಗೆ ಅರೋಚಕವಾಯಿತು. ಆದ್ದರಿಂದ ಒಂದು ದಿನ ತರಗತಿಗೆ ಬಂದ ಪ್ರೊಫೆಸರ್ ಖದೀಜಾಳೊಡನೆ ಹೀಗೆಂದರು:

"ಇಂತಹ ಭೀತಿ ಹುಟ್ಟಿಸುವ ಭೂತದ ವೇಷದಲ್ಲಿ ತರಗತಿಗೆ ಬರಬಾರದು."

"ಭೂತಕ್ಕೆ ಹೆದರುವವರು ಪ್ರೊಫೆಸರ್ ಆಗಬಾರದು" ಖದೀಜಾ ಮೆಲು ದನಿಯಿಂದ ಉತ್ತರಿಸಿದಳು.

ಇದನ್ನು ಕೇಳಿದ ಗೆಳತಿಯರೆಲ್ಲರೂ ಗೊಳ್ಳನೆ ನಕ್ಕರು. ಇದರಿಂದ ಕೋಪಗೊಂಡ ಪ್ರೊಫೆಸರ್ ಬಾಯಿಗೆ ಬಂದಂತೆ ಬಯ್ದರು. ಪ್ರೊಫೆಸರ್‌ರ ತೆಗಳಿಕೆ ಖದೀಜಾಳ ಮನಸ್ಸನ್ನು ನೋಯಿಸಿತು. ಅಂದು ಅಳುತ್ತಾ ಆಕೆ ಕಾಲೇಜಿನ ಗೇಟಿನಿಂದ ಹೊರ ಬಂದಳು.

ಮನೆಗೆ ತಲುಪಿದ ಖದೀಜಾ ದೃಢ ನಿರ್ಧಾರ ಮಾಡಿದಳು. ಒಂದು ವೇಳೆ ಕಾಲೇಜು ಅಧ್ಯಯನ ಅರ್ಧದಲ್ಲಿ ನಿಂತರೂ ಅಧರ್ಮ ಅಥವಾ ಅನ್ಯಾಯಕ್ಕೆ ಮಣಿಯುವುದಿಲ್ಲ. ಇಸ್ಲಾಮಿ ನಿಯಮಗಳನ್ನು ಉಲ್ಲಂಘಿಸುವುದಿಲ್ಲ. ಮರುದಿನ ತರಗತಿಗೆ ಹೋದ ಖದೀಜಾಳನ್ನು ಪ್ರಿನ್ಸಿಪಾಲ್ ಕೊಠಡಿಗೆ ಕರೆಸಿದರು. ಅವರು ಸ್ವಲ್ಪ ಗಡುಸಾಗಿಯೇ ಕೇಳಿದರು:

"ಯಾಕೆ ಈ ಪ್ರಾಕೃತ ವೇಷ."

"ನಾನೋರ್ವ ಮುಸ್ಲಿಮ್ ಮಹಿಳೆ. ಕುರ್‌ಆನಿನಲ್ಲಿ ವಿಶ್ವಾಸವುಳ್ಳವಳು. ನಾನು ಅದು ಆದೇಶಿಸಿರುವ ಈ ಉಡುಪು ಧರಿಸಿದ್ದೇನೆ."

"ಕುರ್‌ಆನ್ ಹಾಗೆ ಹೇಳಿಲ್ಲವಲ್ಲಾ?"

"ಹೇಳಿದೆ- ಸೂರಃ ಅನ್ನೂರ್‌ನ 31ನೆಯ ಸೂಕ್ತದಲ್ಲಿ ಹೀಗಿದೆ- ಪ್ರವಾದಿಗಳೇ, ಸತ್ಯವಿಶ್ವಾಸಿನಿಯರಾದ ಸ್ತ್ರೀಯರೊಡನೆ ಹೇಳಿರಿ. ಅವರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಲಿ ಮತ್ತು ತಮ್ಮ ಗುಪ್ತಾಂಗಗಳನ್ನು ಕಾಯ್ದುಕೊಳ್ಳಲಿ. ತಮ್ಮ ಸೌಂದರ್ಯ ವನ್ನು ಹೊರಗೆ ಪ್ರದರ್ಶಿಸದಿರಲಿ, ಸ್ವಯಂ ಪ್ರಕಟವಾಗುವುದರ ಹೊರತು ತಮ್ಮ ಮುಸುಕನ್ನು ಇಳಿಸಿ, ಎದೆಯನ್ನು ಮುಚ್ಚಿ ಕೊಳ್ಳಲಿ. ಸೂರಃ ಅಹ್‌ಝಾಬ್‌ನ 59ನೆಯ ಸೂಕ್ತದಲ್ಲಿಯೂ ಅದನ್ನು ತಿಳಿಸಲಾಗಿದೆ. "ಓ ಪ್ರವಾದಿಗಳೇ! ನಿಮ್ಮ ಪತ್ನಿಯರಿಗೂ ಪುತ್ರಿಯರಿಗೂ ಸತ್ಯವಿಶ್ವಾಸಿನಿಯರಿಗೂ ತಿಳಿಸಿರಿ. ಅವರು ಹೊರಗೆ (ಹೋಗುವಾಗ) ತಮ್ಮ ಮುಖ ವಸ್ತ್ರಗಳನ್ನು ಇಳಿಸಿಬಿಡಲಿ. ಇದು ಗುರುತಿಸಲು ಮತ್ತು ಸತಾಯಿಸಲ್ಪಡ ದಿರಲು ಅತ್ಯಂತ ಅನುಕೂಲವಾಗಿದೆ. ಅಲ್ಲಾಹನು ಹಿರಿಯ ಕ್ಷಮಾಶೀಲನೂ ದಯಾಮಯನೂ ಆಗಿದ್ದಾನೆ."

ಖದೀಜಾಬಾನು ಕುರ್‌ಆನ್ ವಾಕ್ಯಗಳನ್ನು ಉದ್ಧರಿಸಿದಾಗ ಪ್ರಿನ್ಸಿಪಾಲರು ನಿರುತ್ತರ ರಾದರು. ಅವರು ಆಕೆಯನ್ನು ಹೊರಗೆ ಕಳುಹಿಸಿದರು. ಮರುದಿನ ಖದೀಜಾ ಶಿರವಸ್ತ್ರ

ಧರಿಸಿ ತರಗತಿಗೆ ಹಾಜರಾದಳು. ಅಂದು ಪ್ರೊಫೆಸರ್‌ಗೆ ಬದಲಾಗಿ ಪ್ರಿನ್ಸಿಪಾಲ್ ಸ್ವತಃ ಕ್ಲಾಸಿಗೆ ಬಂದಿದ್ದರು. ಖದೀಜಾಳಿಗೆ ಪರಿಸ್ಥಿತಿ ಅರ್ಥವಾಗಿದ್ದರೂ ಇತರ ವಿದ್ಯಾರ್ಥಿನಿಯರು ಅಚ್ಚರಿಗೊಂಡರು. ಏನಾದರೂ ಗಂಭೀರ ಸಮಸ್ಯೆಯಿದ್ದರೆ ಮಾತ್ರ ಪ್ರಿನ್ಸಿಪಾಲ್ ಕ್ಲಾಸಿಗೆ ಬರುತ್ತಿದ್ದರು.

ಅಂದು ಪ್ರಿನ್ಸಿಪಾಲ್ ಒಂದು ಸುದೀರ್ಘ ಭಾಷಣದ ತಯಾರಿ ನಡೆಸಿ ಬಂದಿದ್ದರು. ಕೈಯಲ್ಲಿ ಹಲವಾರು ಟಿಪ್ಪಣಿಗಳಿದ್ದುವು. ಹಳೆಯ ವಿಚಾರಗಳನ್ನು ತೊರೆದು ಪ್ರಗತಿಪರ ಹಾಗೂ ಪರಿಷ್ಕೃತ ನೀತಿಗಳನ್ನು ಅವಲಂಬಿಸಬೇಕಾದ ಅಗತ್ಯಗಳನ್ನು ಅವರು ತಮ್ಮ ಭಾಷಣದಲ್ಲಿ ವಿವರಿಸಿದರು. ಮಹಿಳೆಯರು ತಲೆ ಮತ್ತು ಎದೆಯನ್ನು ಮರೆಸಬೇಕೆಂದು ಕುರ್‌ಆನ್ ಹೇಳಿರುವುದು ವಿವಾಹಿತ ಸ್ತ್ರೀಯರಿಗೆಂದು ಹೇಳಲೂ ಅವರು ಮರೆಯಲಿಲ್ಲ. ಆ ಬಳಿಕ ಖದೀಜಾಳತ್ತ ತಿರುಗಿ, "ನೀನು ವಿವಾಹಿತೆಯೇ"? ಎಂದು ಪ್ರಶ್ನಿಸಿದರು.

"ಅಲ್ಲ."

"ಹಾಗಾದರೆ ತಲೆಗೆ ಈ ರೀತಿ ಮುಸುಕು ಹಾಕುವುದೇಕೆ?"

"ಕುರ್‌ಆನಿನ ಆದೇಶವು ಎಲ್ಲ ವಿಶ್ವಾಸಿನಿಯರಿಗೆ ಅನ್ವಯವಾಗುತ್ತದೆ. ಕೇವಲ ವಿವಾಹಿತರು ಪರ್ದಾ ಧರಿಸಬೇಕೆಂಬ ವಾದ ತಪ್ಪು" ಖದೀಜ್ಞಾ ಒತ್ತಿ ಹೇಳಿದಳು.

"ಕುರ್‌ಆನಿನ ಆದೇಶದನ್ವಯ ಗುರುಗಳ ಅನುಸರಣೆಯೂ ನಿನ್ನ ಕರ್ತವ್ಯವಾಗಿದೆ. ಆದ್ದರಿಂದ ಇದೋ ನೀನು ಮುಖದ ಮುಸುಕು ಬಟ್ಟೆಯನ್ನು ತೆಗೆಯಬೇಕೆಂದು ಆಜ್ಞಾಪಿಸುತ್ತೇನೆ."

"ಅಲ್ಲಾಹನನ್ನು ಧಿಕ್ಕರಿಸಿ ನಾನು ಯಾರ ಆದೇಶವನ್ನೂ ಪಾಲಿಸಲಾರೆ. ಸೃಷ್ಟಿಕರ್ತನ ಕಾನೂನುಗಳಿಗೆ ವಿರುದ್ಧವಾಗಿ ಸೃಷ್ಟಿಗಳನ್ನು ಅನುಸರಿಸಬಾರದು. ಶಿರದ ವಸ್ತ್ರವನ್ನು ತೆಗೆಯುವುದಕ್ಕಿಂತ ನನ್ನ ಶಿರಚ್ಛೇದವನ್ನು ನಾನು ಇಷ್ಟಪಡುತ್ತೇನೆ."

"ನಿನ್ನ ಗೆಳತಿಯರೆಲ್ಲರೂ ಶಿರವಸ್ತ್ರವನ್ನು ಧರಿಸದೇ ಕ್ಲಾಸಿಗೆ ಬರುತ್ತಿದ್ದಾರಲ್ಲಾ?"

ಪ್ರಿನ್ಸಿಪಾಲ್‌ರ ಗಂಭೀರ ಪ್ರಶ್ನೆ.

"ಆಗಿರಬಹುದು, ಆದರೆ ಅವರು ನನಗೆ ಮಾದರಿಯಲ್ಲ."

ಕೋಪದಿಂದ ಸಿಡಿಮಿಡಿಗೊಂಡು ಪ್ರಿನ್ಸಿಪಾಲ್ ತರಗತಿಯಿಂದ ಹೊರಟು ಹೋದರು. ಮರುದಿನ ಖದೀಜಾ ಕಾಲೇಜಿಗೆ ತಲುಪಿದಾಗ ಪ್ರಿನ್ಸಿಪಾಲ್ ಆಕೆಯನ್ನು ರೂಮಿಗೆ ಕರೆಸಿದರು. ಅವರ ಕಣ್ಣುಗಳು ಕೆಂಡಕಾರುತ್ತಿದ್ದವು. ಅವರು ರೋಷದಿಂದ ಒಂದು ಪತ್ರಿಕೆಯನ್ನು ಮುಂದೊಡ್ಡಿ, "ಈ ಸುದ್ದಿಯನ್ನು ಪತ್ರಿಕೆಗಳಿಗೆ ನೀಡಿದ್ದು ನೀನೋ?"

"ಹೌದು! ಪತ್ರಿಕೆಯವರು ಬಂದು ವಿಚಾರಿಸಿದಾಗ ನಡೆದ ಘಟನೆ ತಿಳಿಸಿದೆ."

"ಹಾಗಾದರೆ ನೀನು ಸಈದ್ ನೂರ್ಸಿಯವರ ಬೆಂಬಲಿಗಳೇ? ನೀನು ಈ ಸಂಸ್ಥೆಗೆ ಯಾಕೆ ಕೆಟ್ಟ ಹೆಸರು ತರುತ್ತೀ? ಇದರ ಪ್ರತಿಷ್ಠೆಗೆ ಯಾಕೆ ಕಳಂಕ ಹಚ್ಚುತ್ತೀ?"

"ನಾನೆಂದೂ ಹಾಗೆ ಮಾಡಿಲ್ಲ, ಮುಂದೆಯೂ ಮಾಡುವುದಿಲ್ಲ."

"ಹಾಗಾದರೆ ನಾವೇ ಹಾಗೆ ಮಾಡುತ್ತಿರುವೆವೇ?"

"ನಾನು ಹಾಗೆನ್ನುವುದಿಲ್ಲ."

"ಅದಿರಲಿ. ವಸ್ತ್ರಧಾರಣೆಯ ಕುರಿತು ಕುರ್‌ಆನಿನ ಆದೇಶವು ಸಂಬಂಧಿಕರ ಮಧ್ಯೆ ಅನ್ವಯವಾಗುವುದಿಲ್ಲವೆಂದು ನೀನು ಒಪ್ಪುವೆಯಾ?"

"ಹೌದು. ಅದನ್ನು ನಾನು ನಿರಾಕರಿಸುವುದಿಲ್ಲ."

"ಕಾಲೇಜು ಕೂಡಾ ಒಂದು ಕುಟುಂಬವಾಗಿದೆ. ಅಲ್ಲಿರುವ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಆ ಕುಟುಂಬದ ಸದಸ್ಯರು."

"ಯಾರ ಮುಂದೆ ವಸ್ತ್ರಧಾರಣೆಯಲ್ಲಿ ವಿನಾಯಿತಿಯಿದೆಯೆಂದು ಕುರ್‌ಆನ್ ವಿವರಿಸಿದೆ. ತಂದೆ, ಪತಿ, ಪತಿಯ ತಂದೆ, ಪುತ್ರರು, ಪತಿಯ ಪುತ್ರರು, ಸಹೋದರರು, ಸಹೋದರರ ಪುತ್ರರು, ಸಹೋದರಿಯರ ಪುತ್ರರು ಮುಂತಾದವರು."

"ನಿನ್ನ ಅಧಿಕ ಪ್ರಸಂಗ ಬೇಡ" ಪ್ರಿನ್ಸಿಪಾಲ್ ಕೋಪದಿಂದ ಗದರಿದರು. ಖದೀಜಾ ಇದಿರು ಹೇಳದೇ ಮೌನ ವಹಿಸಿದಳು. ಸ್ವಲ್ಪ ಹೊತ್ತಿನ ಬಳಿಕ ಪ್ರಿನ್ಸಿಪಾಲ್ ಕೇಳಿದರು, "ಇತರ ಮುಸ್ಲಿಮರಿಗಿಂತ ನೀನೊಬ್ಬಳೇ ಭಿನ್ನವಾಗಿರುವುದೇಕೆ? ಅವರು ಶಿರವಸ್ತ್ರ ಧರಿಸುವುದಿಲ್ಲವಲ್ಲಾ!"

"ಅವರು ಇಸ್ಲಾಮಿ ನಿಯಮಗಳನ್ನು ಪಾಲಿಸದಿರುವುದಕ್ಕೆ ನಾನು ಜವಾಬ್ದಾರಳಲ್ಲ. ಅದರ ಪಾಪವನ್ನು ಅವರು ಮತ್ತು ಅದಕ್ಕೆ ಪ್ರೇರಣೆ ನೀಡಿದವರು ಹೊರಬೇಕು."

"ನಿಲ್ಲಿಸು ನಿನ್ನ ಭಾಷಣ. ಈ ಸಂಸ್ಥೆಯಲ್ಲಿ ಕೆಲವು ನೀತಿ ನಿಬಂಧನೆಗಳಿವೆ. ಅದನ್ನು ಯಾರೂ ಉಲ್ಲಂಘಿಸಬಾರದು. ಆದ್ದರಿಂದ ಶಿರವಸ್ತ್ರ ಧರಿಸಿ ಈ ಶಾಲೆಗೆ ಬರಬಾರದು."

ರೂಮಿನಿಂದ ಹೊರಡಲನುವಾಗುತ್ತಿರುವಾಗ ಖದೀಜಾ ತನ್ನಿಂದಾದಷ್ಟು ಧೈರ್ಯ ಮಾಡಿ ಪ್ರಿನ್ಸಿಪಾಲ್‌ರ ಮುಖ ನೋಡುತ್ತಾ ಹೀಗೆಂದಳು:

"ಮುಖದ ಮುಸುಕು ಸರಿಸಿದ ಬಳಿಕ ನಾನು ಈ ಕಾಲೇಜಿನಲ್ಲಿ ಕಲಿಯುವ ಅಗತ್ಯವಿಲ್ಲ. ವಸ್ತುತಃ ಈ ವಸ್ತ್ರಧಾರಣೆಯಿಂದ ಯಾರಿಗೂ ಯಾವ ಹಾನಿಯೂ ಆಗುವುದಿಲ್ಲ. ಪರ್ದಾ ಧರಿಸದವರೇ ಸಮುದಾಯವನ್ನು ಮತ್ತು ಸಂಸ್ಥೆಯನ್ನು ಕೆಡಿಸುತ್ತಿದ್ದಾರೆ. ಇದು ಶರೀಅತ್ ಕಾಲೇಜಾಗಿದೆ. ಆದ್ದರಿಂದ ಶರೀಅತ್‌ಗೆ ವಿರೋಧವಾದ

ವಸ್ತ್ರಧಾರಣೆಯನ್ನು ಇಲ್ಲಿ ನಿಷೇಧಿಸಬೇಕು. ನಮ್ಮದು ಒಂದು ಮುಸ್ಲಿಮ್ ರಾಷ್ಟ್ರ ಆದ್ದರಿಂದ ಇಲ್ಲಿ ಇಸ್ಲಾಮೇತರ ಪಾಶ್ಚಾತ್ಯ ಸಂಪ್ರದಾಯವಿರಬಾರದು. ಇಸ್ಲಾಮೀ ಕಾನೂನು ಮತ್ತು ಪದ್ಧತಿಗಳನ್ನು ಜಾರಿ ಗೊಳಿಸಬೇಕು."

---

# ಪ್ರಿಯತಮೆಯ ಪತ್ರ

"ನಮ್ಮ ಈ ವಿವಾಹಕ್ಕೆ ಅನುವು ಮಾಡಿಕೊಟ್ಟ ಅಲ್ಲಾಹನಿಗೆ ಸರ್ವಸ್ತುತಿ. ಈ ಮೂಲಕ ನಾನು ಅತ್ಯಂತ ಸೌಭಾಗ್ಯವತಿಯಾಗಿದ್ದೇನೆ. ನಾನು ಸಂಪೂರ್ಣ ಸಂತೃಪ್ತ ಳಾಗಿದ್ದೇನೆ. ಹೊಸ ಜೀವನಕ್ಕೆ ಹೊಂದಿಕೊಳ್ಳಲು ನನಗೂ ಸಾಧ್ಯವಾದೀತು. ಅದು ಗತಕಾಲಕ್ಕಿಂತ ಹೆಚ್ಚೇನೂ ಭಿನ್ನವಾಗಿರಲಾರದೆಂದು ಭಾವಿಸುತ್ತೇನೆ. ಏಕಾಂಗಿತನ ಮತ್ತು ಅಪರಿಚಿತತೆಯ ಭಾವನೆ ಮೂಡಲಾರದು. ಇಸಾಮ್! ನೀವು ತಂದೆಯ ಮಿತ್ರ ಮತ್ತು ಶಿಷ್ಯರಾಗಿರುವಿರಲ್ಲವೇ! ನಾನು ನಿಮ್ಮನ್ನು ಚೆನ್ನಾಗಿ ಬಲ್ಲೆ. ನೀವು ನನ್ನನ್ನು ಅರಿತಿರು ವಂತೆಯೇ ನಾನೂ ನಿಮ್ಮನ್ನು ಅರಿತಿದ್ದೇನೆ. ನನಗೆ ನಿಮ್ಮ ಕುಟುಂಬದ ಪರಿಚಯವಿರು ವಂತೆ ನಿಮಗೂ ನನ್ನ ಕುಟುಂಬದ ಪರಿಚಯವಿದೆ. ನಾನು ನಿಮ್ಮ ಕುಟುಂಬವನ್ನು ಪ್ರೀತಿಸುವಂತೆಯೇ ನೀವೂ ನನ್ನ ಕುಟುಂಬವನ್ನು ಪ್ರೀತಿಸುತ್ತೀರಿ. ಆದ್ದರಿಂದ ನಮ್ಮ ಮನೆಯು ಹಳೆಮನೆಯ ಪ್ರತಿರೂಪವಾಗ ಬಹುದು. ಅದರಿಂದಾಗಿ ನಾನು ಬಹಳ ಹರ್ಷಿತಳಾಗಿದ್ದೇನೆ. ನೀವು ನನ್ನ ತಂದೆಯ ಜೊತೆ ಅಲ್ಲಾಹನ ಮಾರ್ಗದಲ್ಲಿ ಹೊರಟಿದ್ದೀರಿ. ಅವರನ್ನು ಹಿಂಬಾಲಿಸಿ ಅಲ್ಲಾಹನ ಮಾರ್ಗದಲ್ಲಿ ಪ್ರಾಣ ಅರ್ಪಿಸಿರಿ. ನನಗೆ ಅದಕ್ಕಿಂತ ಆನಂದದಾಯಕ ವಿಷಯ ಬೇರೊಂದಿಲ್ಲ. ಈ ಪಯಣವು ಎರಡು ರೀತಿಯಲ್ಲಿ ಅಂತ್ಯವಾಗಬಹುದು. ಒಂದೋ ವಿಜಯ. ಅದಲ್ಲದಿದ್ದರೆ ಹುತಾತ್ಮಗಿರಿ. ಎರಡು ರೀತಿಯಲ್ಲಿಯೂ ಅಲ್ಲಾಹನ ಪ್ರೀತಿ ಪ್ರತಿಫಲಗಳಿಗೆ ಪಾತ್ರರಾಗುತ್ತೇವೆ. ಪ್ರೀತಿಯ ಇಸಾಮ್! ಅದನ್ನು ಮೀರಿಸುವ ಸಂತೋಷ ನಮಗೆ ಬೇರೆ ಏನಿದೆ?"

ಇದು ಖ್ಯಾತ ವಿದ್ವಾಂಸೆ ಮತ್ತು ಇಸ್ಲಾಮೀ ಕಾರ್ಯಕರ್ತೆಯಾಗಿದ್ದ ಬನಾನ್ ತನ್ನ ಪ್ರಿಯತಮನಿಗೆ ರವಾನಿಸಿದ ಮೊದಲ ಪತ್ರದ ಆಯ್ದ ಭಾಗಗಳು. ಬನಾನ್ ಸುಪ್ರಸಿದ್ಧ ವಿದ್ವಾಂಸ, ವಾಗ್ಮಿ ಮತ್ತು ಸಾಹಿತಿಯಾಗಿದ್ದ ಅಲೀ ತಂತಾವಿಯವರ ಪುತ್ರಿ. ಪತಿ ಇಸಾಮುಲ್ ಅತ್ತಾರ್ ಸಿರಿಯಾದ ಇಖ್ವಾನುಲ್ ಮುಸ್ಲಿಮೂನ್ ಸಂಘಟನೆಯ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಅನಂತರ ಪಶ್ಚಿಮ ಜರ್ಮನಿಯ ಆಖಿನ್ ಇಸ್ಲಾಮೀ ಕೇಂದ್ರದ ನಿರ್ದೇಶಕರಾದರು.

ಬನಾನ್ ತನ್ನ ಮೊದಲ ಪತ್ರದಲ್ಲಿ ಪ್ರಕಟಿಸಿದ ಬಯಕೆ ಸಫಲವಾಯಿತು. ಅವರು ಅಲ್ಲಾಹನ ಹಾದಿಯಲ್ಲಿ ಹುತಾತ್ಮರಾದರು. 1981ರ ಮಾರ್ಚ್ 17ರ ಪ್ರಭಾತದಲ್ಲಿ ಆಖಿನ್ ನಗರದ ಸ್ವಗ್ರಹದಲ್ಲಿ ಗುಂಡೇಟಿನಿಂದ ಹತರಾದರು. ಹಂತಕರು ಸಿರಿಯಾದ ಅಧ್ಯಕ್ಷ ಹಾಫಿಝುಲ್ ಅಸದ್‌ರ ಬಾಡಿಗೆ ಗೂಂಡಾಗಳಾಗಿದ್ದರು. ಅವರು ಬನಾನ್‌ರ ಎದೆಗೆ 5 ಸುತ್ತು ಗುಂಡು ಹಾರಿಸಿದರು. ಆಗ ಪತಿ ಇಸಾಮುಲ್ ಅತ್ತಾರ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು. ಮನೆಯ ಸಮಾಚಾರ ತಿಳಿಯಲು ಮನೆಗೆ ಫೋನ್ ಮಾಡಿದಾಗ ಅವರಿಗೆ ಈ ದುರಂತದ ಸುದ್ದಿ ದೊರೆಯಿತು. ರಿಸೀವರ್ ಕೈಗೆತ್ತಿಕೊಂಡ ಜರ್ಮನ್ ಪೊಲೀಸ್ ಅಧಿಕಾರಿ ಹೇಳಿದ: "ಅತ್ತಾರ್, ನಿಮ್ಮಂತಹ ಓರ್ವ ವೀರ ನಾಯಕನಿಗೆ ಭೂಷಣವಾಗಿರುವಂತೆ ಧೈರ್ಯವಾಗಿರಿ. ಈ ಸುದ್ದಿಯನ್ನು ಸಹಿಸಿಕೊಳ್ಳಲು ಬಹಳಷ್ಟು ಮನೋಸ್ಥೈರ್ಯ ಬೇಕು. ನಿಮ್ಮ ಮತ್ತು ಮಾನವಕುಲದ ವೈರಿಗಳು ನಿಮ್ಮ ಪತ್ನಿ ಬನಾನ್‌ರನ್ನು ಗುಂಡಿಟ್ಟು ಕೊಂದಿದ್ದಾರೆ."

ಪಶ್ಚಿಮ ಜರ್ಮನಿಯ ರಾಜಧಾನಿಯಾಗಿರುವ ಬೋನ್‌ನಿಂದ ನೂರು ಕಿ.ಮೀ. ದೂರದಲ್ಲಿರುವ ಆಖಿನ್ ನಗರದ 14ನೆಯ ನಂಬರ್ ಬೀದಿಯಲ್ಲಿ ವಾಸವಾಗಿದ್ದ ಬನಾನ್‌ರನ್ನು ವಧಿಸುವ ವಿಫಲ ಯತ್ನ ಹಲವು ಬಾರಿ ನಡೆದಿತ್ತು. ಘಟನೆ ನಡೆದ ಹಿಂದಿನ ದಿನ ಅವರಿಗೆ ಒಂದು ಫೋನ್ ಕರೆ ಬಂದಿತ್ತು. ಜರ್ಮನಿ ಭಾಷೆ ಮಾತಾಡುವ ಅಪರಿಚಿತ ಸ್ವರ. ಭಾಗಶಃ ಕೆಟ್ಟಿರುವ ನಿಮ್ಮ ಫೋನ್‌ನ ದುರಸ್ತಿಗಾಗಿ ಕೆಲಸಗಾರರು ಬರುತ್ತಾರೆ. ಅವರಿಗೆ ಬಾಗಿಲು ತೆರೆಯಬೇಕೆಂದು ತಿಳಿಸಲಾಗಿತ್ತು. ತನ್ನ ಕೊಲೆ ಸಂಚಿನ ಕುರಿತು ಚೆನ್ನಾಗಿ ಅರಿತಿದ್ದ ಬನಾನ್‌ರಿಗೆ ಫೋನ್ ಸಂದೇಶದ ಬಗ್ಗೆ ಬಲವಾದ ಸಂಶಯ ಬಂತು. ಅವರು ಟೆಲಿಫೋನ್ ಎಕ್ಸ್‌ಚೇಂಜ್‌ಗೆ ಫೋನ್ ಮಾಡಿ ವಿಚಾರಿಸಿದರು. ಅಲ್ಲಿಂದ ಫೋನ್ ರಿಪೇರಿಗೆ ಯಾರನ್ನೂ ಕಳುಹಿಸಿಲ್ಲವೆಂದು ವ್ಯಕ್ತವಾಯಿತು. ಆ ಕೂಡಲೇ ಅವರು ಪೊಲೀಸರಿಗೆ ತಿಳಿಸಿದರು. ಆದರೆ ಪೊಲೀಸ್ ಅಧಿಕಾರಿಗಳು ಆದಷ್ಟು ಬೇಗನೆ ನೀವು ಅಲ್ಲಿಂದ ಬೇರೆಡೆಗೆ ಹೋಗಿರಿ ಎಂದಷ್ಟೇ ತಿಳಿಸಿದರು. ಬೇರೆ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ.

ಬನಾನ್ ದಂಪತಿಯರ ಪುತ್ರ ಐಮನ್ ಮತ್ತು ಪುತ್ರಿ ಹಾದಿಯ ಹೊರ ಹೋಗಿದ್ದರು. ಅವರ ನೆರೆಮನೆಯಲ್ಲಿದ್ದ ಜರ್ಮನ್ ಮಹಿಳೆ ಪುತ್ರನನ್ನು ಬೀಳ್ಕೊಡಲಿಕ್ಕಾಗಿ ವಿಮಾನ ನಿಲ್ದಾಣಕ್ಕೆ ಹೋಗಲು ಕಟ್ಟಡದ ಪ್ರಧಾನ ಬಾಗಿಲನ್ನು ತೆರೆದಳು. ಆಗ ಸುಮಾರು 16 ವಯಸ್ಸಿನ ಓರ್ವ ಬಾಲಕ ಒಳಗೆ ಪ್ರವೇಶಿಸಿದ. ಆತನು ಬನಾನ್‌ರ ಯಾವನೋ ಸಂದರ್ಶಕನಿರಬಹುದೆಂದು ಆಕೆ ಭಾವಿಸಿದ್ದಳು. ಅಷ್ಟರಲ್ಲಿ ಇನ್ನಿಬ್ಬರು ಒಳ ಬಂದರು. ಆಗ ಜರ್ಮನ್ ಮಹಿಳೆ, "ನೀವು ಇಲ್ಲಿಗೆ ಯಾಕೆ ಬಂದಿರಿ?" ಎಂದು ಪ್ರಶ್ನಿಸಿದಳು.

"ಅತ್ತಾರ್‌ನನ್ನು ಭೇಟಿಯಾಗಲಿಕ್ಕೆ ಬಂದಿದ್ದೇವೆ. ಆತನು ನಮಗೆ ಪಾವತಿಸಬೇಕಾದ ಸಾಲವನ್ನು ವಸೂಲು ಮಾಡಲು ನೀವು ಸಹಾಯ ಮಾಡಬೇಕು" ಎಂದು ಹೇಳಿದರು. ಆ ಮಹಿಳೆ ನಿರಾಕರಿಸಿದಾಗ ಅವರು ಶಸ್ತ್ರ ತೋರಿಸಿ ಆಕೆಯನ್ನು ಬೆದರಿಸಿದರು. ಅವರು ಹೇಳಿದರು, "ನೀವು ನಿತ್ಯದಂತೆ ಮುಗುಳ್ನಗುತ್ತಾ ಅತ್ತಾರ್‌ನ ಬಾಗಿಲು ತಟ್ಟಬೇಕು. ಏನಾದರೂ ಸೂಚನೆ ನೀಡಿದರೆ ನಿಮ್ಮನ್ನು ಕೊಂದು ಬಿಡುತ್ತೇವೆ."

ಹೆದರಿ ಹೆಣದಂತಾದ ಆ ಮಹಿಳೆ ಯಾಂತ್ರಿಕವಾಗಿ ಹಂತಕರ ಆದೇಶವನ್ನು ಪಾಲಿಸಿದಳು. ತನ್ನ ನೆರೆಮನೆಯವಳೆಂದು ತಿಳಿದ ಬಳಿಕ ಬನಾನ್ ಬಾಗಿಲು ತೆರೆದಳು. ಕೂಡಲೇ ಹಂತಕರು ಮನೆಯ ಒಳಗೆ ನುಗ್ಗಿದರು. ಅವರಲ್ಲೊಬ್ಬ ಬನಾನ್‌ರ ಎದೆಗೆ 5 ಬಾರಿ ಗುಂಡಿಟ್ಟ.

ಸಿರಿಯಾದ ಬಅಸ್ ಸಮಾಜವಾದಿ ಪಕ್ಷದ ನಾಯಕ ಹಾಗೂ ದುರಾಡಳಿತಗಾರನಾಗಿದ್ದ ಹಾಫಿಝುಲ್ ಅಸದ್‌ರ ಕ್ರೂರ ಆಡಳಿತಕ್ಕೆ 'ಇಖ್ವಾನುಲ್ ಮುಸ್ಲಿಮೂನ್' ಎಂಬ ಇಸ್ಲಾಮೀ ಆಂದೋಲನವು ಆತಂಕವೊಡ್ಡಿತ್ತು. ಅತ್ತಾರ್ ಕುಟುಂಬವು ಅದರ ನಾಯಕತ್ವ ವಹಿಸಿತ್ತು. ಆದ್ದರಿಂದ ಇಸ್ಲಾಮ್ ವಿರೋಧಿ ಶಕ್ತಿಗಳ ವೈರಕ್ಕೆ ಅವರು ಗುರಿಯಾದರು.

ಇಸ್ಲಾಮೀ ವಿಷಯಗಳಲ್ಲಿ ಅಗಾಧ ಪಾಂಡಿತ್ಯಗಳಿಸಿದ್ದ ಬನಾನ್, ಮಾತೃಭಾಷೆಯಾಗಿದ್ದ ಅರಬಿ ಮಾತ್ರವಲ್ಲ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿಯೂ ಚೆನ್ನಾಗಿ ವ್ಯವಹರಿಸಬಲ್ಲವರಾಗಿದ್ದರು. ಸಂಪೂರ್ಣ ಜೀವನವನ್ನು ಅಲ್ಲಾಹನ ಮಾರ್ಗಕ್ಕೆ ಅರ್ಪಿಸಿದ್ದ ಆ ವೀರ ಮಹಿಳೆ 37ನೆಯ ವಯಸ್ಸಿನಲ್ಲಿ ಹುತಾತ್ಮರಾದರು. ಅವರು ಪ್ರಿಯತಮನಿಗೆ ಹಲವೊಮ್ಮೆ ಬರೆದ ಪತ್ರಗಳು ತಲೆತಲಾಂತರಗಳಿಗೆ ನೀತಿ ಮತ್ತು ಸ್ಫೂರ್ತಿಯನ್ನು ನೀಡುವಂಥದ್ದಾಗಿದೆ. ಅವರು ಬರೆದ ಪತ್ರದ ಕೆಲವು ತುಣುಕುಗಳನ್ನು ಇಲ್ಲಿ ಕೊಡುತ್ತೇನೆ.

ಪ್ರಿಯ ಇಸಾಮ್,

"ನೀವು ಅಲ್ಲಾಹನ ಧರ್ಮಕ್ಕಾಗಿ ಸರಕಾರದ ಹುದ್ದೆ ಮತ್ತು ಸ್ಥಾನಮಾನಗಳನ್ನು ಕಿತ್ತೆಸೆದಾಗ ನಿಮ್ಮ ಬಗ್ಗೆ ನನ್ನ ಮನದಲ್ಲಿದ್ದ ಪ್ರೀತಿಯು ಹಲವು ಪಟ್ಟು ಹೆಚ್ಚಿತು. ನೀವು ಆಯ್ದುಕೊಂಡ ಸ್ವತಂತ್ರ ಮತ್ತು ಸಹಜವಾದ ಇಸ್ಲಾಮೀ ಹಾದಿಯಲ್ಲಿ ಮುನ್ನಡೆಯಿರಿ. ಆಮಿಷಗಳು ಅದೆಷ್ಟು ಹಿರಿದಾಗಿದ್ದರೂ ತಿರಸ್ಕರಿಸಿರಿ. ಪ್ರಚೋದನೆ ಮತ್ತು ಹಿಂಸೆಯು ಎಷ್ಟೇ ಘೋರವಾಗಿದ್ದರೂ ತುಚ್ಛೀಕರಿಸಿರಿ. ಈ ಜೀವನವು ನಿಮ್ಮ ಸೇವೆ ಮತ್ತು ನಿಮ್ಮ ಇಸ್ಲಾಮೀ ಚಟುವಟಿಕೆಗಳಲ್ಲಿ ಭಾಗಿಯಾಗುವುದಕ್ಕೆ ಮೀಸಲಾಗಿದೆ. ಆದರೆ ನಾನು ಯಾವಾಗಲೂ ಎಲ್ಲೆಡೆಯೂ ನಿಮ್ಮ ಜತೆಗಿದ್ದೇನೆ. ನಿಮ್ಮೊಂದಿಗೆ ಅತ್ಯಂತ

ಕಠಿಣ ಮತ್ತು ಅಪಾಯಕಾರಿ ಬಾಳ್ವೆಯನ್ನು ಹಂಚಿಕೊಳ್ಳುವುದಕ್ಕಿಂತ ಪ್ರಿಯವಾದ ವಸ್ತು ಮತ್ತೊಂದಿಲ್ಲ. ನನಗೆ ಅದೇ ಅಮೂಲ್ಯವಾಗಿದೆ. ಅಲ್ಲಾಹನ ಮೇಲಿನ ಅಚಂಚಲ ವಿಶ್ವಾಸ ಮಾತ್ರ ಕುದಿಯುತ್ತಿರುವ ಹೃದಯಕ್ಕೆ ತಂಪು ನೀಡಬಲ್ಲುದು."

1966ರಲ್ಲಿ ಜಮಾಲ್ ಅಬ್ದುಲ್ ನಾಸರ್‌ರ ಜೈಲಿನಲ್ಲಿ ಕ್ರೂರ ಹಿಂಸೆಗೀಡಾದ ಸಯ್ಯದ್ ಕುತುಬ್ ಮತ್ತು ಸಹಕಾರ್ಯಕರ್ತರ ಪರವಾಗಿ ಧ್ವನಿ ಎತ್ತಿದ್ದಕ್ಕಾಗಿ ಅತ್ತಾರ್‌ರನ್ನು ಬಂಧಿಸಲಾಯಿತು. ಬೈರೂತ್ ಜೈಲಿನಲ್ಲಿದ್ದ ಅತ್ತಾರ್‌ರಿಗೆ ಬನಾನ್ ಹೀಗೆ ಪತ್ರ ಬರೆದರು:

"ನನ್ನ ಅಥವಾ ಮಕ್ಕಳ ಕುಟುಂಬದ ಬಗ್ಗೆ ಚಿಂತಿಸಬೇಡಿರಿ. ಎಂದಿನಂತೆಯೇ ಕಾರ್ಯಕರ್ತರು, ಚಟುವಟಿಕೆಗಳು ಮತ್ತು ಹೊಣೆ ನಿರ್ವಹಣೆಯ ಬಗ್ಗೆ ಮಾತ್ರ ಚಿಂತಿಸಿರಿ. ನಿಮ್ಮಿಂದ ನಾವು ಏನನ್ನೂ ಬಯಸುವುದಿಲ್ಲ. ನಮಗೆ ಏನೂ ಬೇಡ. ನೀವು ಎಲ್ಲಿ ಯಾವ ಪರಿಸ್ಥಿತಿಯಲ್ಲಿದ್ದರೂ ಅಲ್ಲಾಹನ ಮಾರ್ಗದಲ್ಲಿ ಪ್ರಾಮಾಣಿಕತೆ ಮತ್ತು ಏಕಾಗ್ರಚಿತ್ತದಿಂದ ಕಾರ್ಯ ನಿರ್ವಹಿಸಿರಿ. ಅಲ್ಲಾಹನ ಅಚ್ಚುಮೆಚ್ಚಿನ ನೇರ ಹಾದಿಯನ್ನು ಹಿಡಿಯಿರಿ. ಇದೇ ನಮ್ಮ ಬೇಡಿಕೆಯಾಗಿದೆ. ಪ್ರಿಯ ಇಸಾಮ್, ನಮ್ಮ ಮತ್ತು ನಿಮ್ಮ ಜೊತೆ ಅಲ್ಲಾಹನಿದ್ದಾನೆ. ನಮಗೆ ಆತನೇ ಸಾಕು. ಆತನು ನಮಗಾಗಿ ಏನನ್ನು ನಿರ್ಣಯಿಸಿರುವನೋ ಅದೇ ನಮಗೆ ಉತ್ತಮ."

ವಿದೇಶದಲ್ಲಿ ವಾತಪೀಡಿತರಾಗಿ ಮಲಗಿದ ಪ್ರಿಯತಮನಿಗೆ ಬನಾನ್ ಹೀಗೆ ಬರೆದರು.

"ನಲ್ಮೆಯ ಇಸಾಮ್, ನೀವು ದುಃಖಿಸಬೇಡಿ, ನಿಮ್ಮ ಕಾಲಿಗೆ ನಡೆಯುವ ಶಕ್ತಿ ಇಲ್ಲದಿದ್ದರೆ ನೀವು ನಮ್ಮ ಕಾಲಿನಿಂದ ನಡೆಯಬಹುದು. ನಿಮ್ಮ ಕೈಗಳಿಗೆ ಬರೆಯುವ ಶಕ್ತಿ ಇಲ್ಲದಿದ್ದರೆ ನೀವು ನಮ್ಮ ಕೈಗಳಿಂದ ಬರೆಯಬಹುದು. ನೀವು ನೆಚ್ಚಿದ ಸ್ವಾತಂತ್ರ್ಯ ಮತ್ತು ವಿಶಿಷ್ಟವಾದ ಇಸ್ಲಾಮೀ ಹಾದಿಯಲ್ಲಿ ಮುನ್ನಡೆಯಿರಿ. ಅಗತ್ಯಬಿದ್ದರೆ ಒಣರೊಟ್ಟಿಯಿಂದ ನಾವು ಹಸಿವು ತಣಿಸಿಕೊಳ್ಳುತ್ತೇವೆ. ಡೇರೆಗಳಲ್ಲಿ ವಾಸಿಸುತ್ತೇವೆ. ಏನೇ ಬಂದರೂ ನಾವು ಯಾವಾಗಲೂ ಎಲ್ಲೆಡೆ ನಿಮ್ಮ ಜತೆಗಿರುತ್ತೇವೆ."

ಮತ್ತೊಮ್ಮೆ ಅವರು ಪತಿಗೆ ಹೀಗೆ ಬರೆದರು: "ಪ್ರೀತಿಯ ಇಸಾಮ್, ನಮ್ಮ ಪುತ್ರಿ ಹಾದಿಯಳಿಗೆ ವಿವಾಹವಾಯಿತು. ಪುತ್ರ ಐಮನ್ ದೊಡ್ಡವನಾಗಿದ್ದಾನೆ. ಆತನಿಗೆ 11 ವರ್ಷವಾಯಿತು. ಇನ್ನು ನಾನು ನನ್ನ ವೇಳೆಯನ್ನು ಸಂಪೂರ್ಣವಾಗಿ ಧರ್ಮ ಸೇವೆಗೆ ವಿನಿಯೋಗಿಸಬಹುದು. ಅದೇ ನನ್ನ ಬಯಕೆ. ಅಲ್ಲಾಹನ ಹಾದಿಯಲ್ಲಿ ಹುತಾತ್ಮನಾಗುವ ಯಾವನೇ ಬಾಲಕ ನನ್ನ ಪ್ರಿಯ ಪುತ್ರನಾಗಿದ್ದಾನೆ. ನಾನು ಆತನ ವಾತ್ಸಲ್ಯದ ಮಾತೆ. ಇದು ನನ್ನ ಭಾವನೆಯಾಗಿದೆ. ಪ್ರಿಯಪುತ್ರನ ವಿಯೋಗಕ್ಕಾಗಿ ವ್ಯಥೆಯಿಂದ ಹಪಹಪಿಸುವ ಮಮತೆಯ ತಾಯಿಯ ಪ್ರೇಮ ಪ್ರಪಂಚವನ್ನು ನಾನು ಅವರಿಗೆ ಒದಗಿಸುತ್ತೇನೆ."

ಇಸಾಮ್ ದಂಪತಿಯರಿಗೆ ಸಿರಿಯಾ ಪ್ರದೇಶವನ್ನು ನಿಷೇಧಿಸಲಾಗಿತ್ತು. ಆದ್ದರಿಂದ ಬನಾನ್ ಒಮ್ಮೆ ಪ್ರಿಯತಮನಿಗೆ ಹೀಗೆ ಬರೆದರು:

"ಹಲವೊಮ್ಮೆ ನನ್ನ ಮನದಲ್ಲಿ ಒಂದು ಆಸೆ ಮೂಡುತ್ತಿದೆ. ಹದಿನೇಳು ವರ್ಷ ಸಂದರೂ ಆ ಮೋಹ ತೊಲಗಿ ಹೋಗಿಲ್ಲ. ಅದೊಂದು ಮನೋದೌರ್ಬಲ್ಯ! ಸಾಯುವುದಕ್ಕಿಂತ ಮುಂಚೆ ಡೆಮಾಸ್ಕಸ್‌ಗೆ ಮರಳುವಂತಾಗಿದ್ದರೆ! ಉಳಿದ ಜೀವನವನ್ನು ಅಲ್ಲಿ ಬಾಳುವಂತಾಗಿದ್ದರೆ! ನಾವು ಮರಣ ಹೊಂದಿದಾಗ ನಮ್ಮ ಆಪ್ತೇಷ್ಟರು ಮತ್ತು ಬಂಧು ಮಿತ್ರಾದಿಗಳು ಅಂತ್ಯ ವಿಶ್ರಾಂತಿ ಪಡೆಯುತ್ತಿರುವ ದಹ್‌ದಾಹ್‌ನ ಮಣ್ಣಿನಲ್ಲಿ ದಫನಗೊಳ್ಳುವಂತಾಗಿದ್ದರೆ! ಆದರೆ ಮರಣವು ನಮ್ಮನ್ನು ಸದಾ ಹಿಂಬಾಲಿಸುತ್ತದೆ. ಜೀವನದಂತೆಯೇ ನಮ್ಮ ದಫನವೂ ವಿದೇಶಿ ಮಣ್ಣಿನಲ್ಲಿ ನಡೆಯುವುದೆಂದು ನನಗೆ ಭಾಸವಾಗುತ್ತಿದೆ. ಸ್ವದೇಶ ಮತ್ತು ಕುಟುಂಬಗಳಿಗಿಂತ ಬಹುದೂರದಲ್ಲಿ. ಆದರೆ ನಮ್ಮ ಸಂತಾನ ಮತ್ತು ಸಹಕಾರ್ಯಕರ್ತರು ಎಂದಾದರೂ ಸಿರಿಯಾಕ್ಕೆ ಮರಳಬಹುದು. ಅವರು ಅಲ್ಲಿಗೆ ತಲುಪಿದರೆ ನಮ್ಮ ಎಲ್ಲ ತ್ಯಾಗಗಳ ಪ್ರತಿಫಲವನ್ನು ಅವರು ಈ ಲೋಕದಲ್ಲಿಯೇ ಅನುಭವಿಸುವರು. ಸ್ವಾತಂತ್ರ್ಯ ಮತ್ತು ಇಸ್ಲಾಮೀ ಪದ್ಧತಿ ಉದಯಗೊಂಡ ಸಿರಿಯಾ.

ಈ ವಿದೇಶ ಜೀವನದಲ್ಲಿಯೇ ಮರಣ ಬಂದರೆ ನೀವು ನನಗಾಗಿ ಒಂದು ಉಪಕಾರ ಮಾಡುವಿರೆಂದು ಭರವಸೆ ನೀಡಬೇಕು. ನನ್ನಿಂದಾಗಿ ಕಳೆದ 17 ವರ್ಷಗಳಿಂದ ವಿರಹವೇದನೆಯಿಂದ ಕಣ್ಣೀರಿನ ಬಾಳ್ವೆ ನಡೆಸುತ್ತಿರುವ ತಂದೆ, ತಾಯಿ, ಸಹೋದರಿ ಮತ್ತು ಕುಟುಂಬದೊಂದಿಗೆ ನನಗೆ ಕ್ಷಮೆ ನೀಡುವಂತೆ ವಿಜ್ಞಾಪಿಸಬೇಕು. ನಿಮ್ಮ ಸಂಗಡ ಜಿಹಾದ್‌ನ ಈ ಮಾರ್ಗವನ್ನು ಸ್ವೀಕರಿಸಿದ್ದರಿಂದ ನಾನು ಕಿಂಚಿತ್ತೂ ದುಃಖಿತಳಾಗಿದ್ದಿಲ್ಲ. ಸಂಪೂರ್ಣ ಸಂತುಷ್ಟಳಾಗಿದ್ದೇನೆಂದು ಅವರಿಗೆ ತಿಳಿಸಬೇಕು. ನೀವು ಅದನ್ನು ಚೆನ್ನಾಗಿ ತಿಳಿದಿದ್ದೀರಿ. ನನಗೆ ಜನರ ಔದಾರ್ಯ ಮತ್ತು ಅಲ್ಲಾಹನ ಕ್ಷಮೆ ಬೇಕಾಗಿದೆ. ಹೃದಯಾಂತರಾಳದಿಂದ ಹರಿದು ಬರುವ ನಿಷ್ಕಪಟ ಮತ್ತು ನಿಷ್ಕಳಂಕವಾದ ಪ್ರಾರ್ಥನೆಯೇ ನನಗೆ ಸಾಕು."

ತನ್ನ ಮತ್ತು ಕುಟುಂಬಗಳ ಮೇಲೆ ವೈರಿಗಳ ಕಣ್ಣು ನೆಟ್ಟಿದೆಯೆಂದು ಮನಗಂಡ ಬನಾನ್ ಪತಿಗೆ ಹೀಗೆ ಬರೆದರು:

"ಅಸತ್ಯದ ರಕ್ಷಕರಾಗಿರುವ ದುಷ್ಟರು ನನ್ನನ್ನು ಮತ್ತು ನನ್ನ ಮಕ್ಕಳನ್ನು ಕೊಂದರೆ ನೀವು ಕಿಂಚಿತ್ತೂ ಅಳುಕಬೇಡಿರಿ. ಸತ್ಯದ ಹಾದಿಯಲ್ಲಿ ಅತಿ ಉತ್ಸಾಹದಿಂದ ಮುನ್ನಡೆಯಿರಿ. ಬೇರೇನೂ ಸಂಭವಿಸದೆಂದು ನೀವು ನನಗೆ ಭಾಷೆ ಕೊಡಬೇಕು ಅಥವಾ ಒಂದು ವೇಳೆ ನಿಮ್ಮ ಕೊಲೆಯಾದರೆ ನಿಮ್ಮ ಜತೆ ಇಸ್ಲಾಮಿನ ಉಜ್ವಲ ಹಾದಿಯಲ್ಲಿ

ಪ್ರವೇಶಿಸಿದ್ದ ನಾವು ಪ್ರಯಾಣವನ್ನು ನಿರಂತರ ಮುಂದುವರಿಸುವೆವೆಂದು ನಾನು ನಿಮಗೆ ಭಾಷೆ ಕೊಡುತ್ತೇನೆ. ಒಂದೋ ಹುತಾತ್ಮ ಪದವಿ, ಇಲ್ಲದಿದ್ದರೆ ವಿಜಯ. ಸರ್ವಶಕ್ತನಾದ ಪ್ರಭುವಿನ ಸನ್ನಿಧಿಯಲ್ಲಿ ಆತನ ಸಂಪ್ರೀತಿಗೆ ಪಾತ್ರರಾಗಿ ನಾವು ನಾಳೆ ಸಂಧಿಸೋಣ."

ಹತ್ಯೆಯ ಹಿಂದಿನ ವಾರ ಬನಾನ್, ತಮ್ಮ ಪತಿಯನ್ನು ಆಸ್ಪತ್ರೆಗೆ ಸೇರಿಸಿದ್ದರು. ಬನಾನ್ ಅವರೇ ಕಾರು ಚಲಾಯಿಸಿದ್ದರು. ಸಿರಿಯಾ ಹಾಗೂ ಜಗತ್ತಿನ ಇತರೆಡೆಗಳಿಂದ ಬರುವ ಫೋನ್ ಕರೆಗೆ ಉತ್ತರಿಸುವುದಕ್ಕಾಗಿ ಉಮ್ಮು ಹಾಮನ್ ಮನೆಯಲ್ಲಿರಬೇಕಾದುದು ಅನಿವಾರ್ಯವಾಗಿತ್ತು. ಆದ್ದರಿಂದ ಅವರು ಆಸ್ಪತ್ರೆಯಲ್ಲಿ ನಿಲ್ಲಲಿಲ್ಲ. ಆದರೂ ದಿನನಿತ್ಯ ಹಲವು ಬಾರಿ ತಿಯೊಂದಿಗೆ ಫೋನ್‌ನಲ್ಲಿ ಮಾತಾಡುತ್ತಿದ್ದರು. ಕೊಲೆ ನಡೆದ ಹಿಂದಿನ ರಾತ್ರಿಯೂ ಅವರು ತುಂಬಾ ಹೊತ್ತು ಮಾತಾಡಿದ್ದರು. ಕೊನೆಯಲ್ಲಿ ಹೀಗೆ ಹೇಳಿದ್ದರು: "ಅದೇನೋ ನನಗೆ ಅರ್ಥವಾಗುವುದಿಲ್ಲ. ಈ ಬಾರಿ ವೈರಿಗಳ ಪ್ರಯತ್ನ ಯಶಸ್ವಿಯಾಗುವುದೆಂಬ ಅನಿಸಿಕೆ ಬಲವಾಗಿದೆ. ನೀವು ಧೈರ್ಯದಿಂದ ಮತ್ತು ಅತ್ಯಂತ ಎಚ್ಚರಿಕೆಯಿಂದ ಮುಂದೆ ಸಾಗಬೇಕೆಂದು ಬಯಸುತ್ತೇನೆ.

ಇಂದು ಸಮಾರ್ಝ್‌ನಾದ್ಯಂತ, ಅಪರಾಧಿಗಳ ಗುಂಡಿಗೆ ನಿಮ್ಮ ಬದಲಿಗೆ ನಾನು ಗುರಿಯಾಗಬೇಕೆಂದು ಸುದೀರ್ಘವಾಗಿ ಪ್ರಾರ್ಥಿಸುತ್ತೇನೆ. ಏಕೆಂದರೆ ನೀವು ಈಗ ಸಾಯಬಾರದು. ನಮ್ಮ ಆಂದೋಲನಕ್ಕೆ ನಿಮ್ಮ ಅಗತ್ಯ ಈ ಸಂದರ್ಭದಲ್ಲಿ ಬಹಳವಿದೆ. ಪರಿಸ್ಥಿತಿ ಎಷ್ಟೇ ಪ್ರತಿಕೂಲವಾದರೂ ಇಸ್ಲಾಮಿನ ಪವಿತ್ರ ಹಾದಿಯಲ್ಲಿ ಮುನ್ನಡೆಯಿರಿ. ಒಂದು ವೇಳೆ ನೀವು ನನ್ನನ್ನು ಕಳೆದುಕೊಳ್ಳಬೇಕಾದೀತು. ಹಾಗಾದರೆ ಅಲ್ಲಾಹನೇ ನಿಮ್ಮ ಸಂಗಾತಿ. ನಲ್ಮೆಯ ಇಸಾಮ್, ಶಾಂತರಾಗಿರಿ. ಕರುಣಾನಿಧಿಯಾದ ಅಲ್ಲಾಹನ ಅನುಗ್ರಹ ನಮ್ಮ ಮೇಲಿರಲಿ."